

ಕಾಯಕವೇ ಕೈಲಾಸ

# ಸಿದ್ಧಗಂಗಾ



ಸಂಪುಟ : ೪೨ ಜೂನ್ ೨೦೦೬ ಸಂಚಿಕೆ ೬



ಹಾಸನದಲ್ಲಿ ಜರುಗಿದ ಪೂಜ್ಯ ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮೀಜಿಯವರ ೯೯ನೇ ವರ್ಷದ ಗುರುವಂದನೆ ಮತ್ತು ಬಸವ ಜಯಂತಿ ಕಾರ್ಯಕ್ರಮವನ್ನು ಮಾಜಿ ಪ್ರಧಾನಿ ಸನ್ಮಾನ್ಯ ಶ್ರೀ ಹೆಚ್.ಡಿ. ದೇವೇಗೌಡರು ಜ್ಯೋತಿ ಬೆಳಗಿಸಿ ಉದ್ಘಾಟಿಸಿದರು. ಸುತ್ತೂರು ಜಗದ್ಗುರುಗಳಾದ ಶ್ರೀ ಶ್ರೀ ಶಿವರಾತ್ರಿ ದೇಶೀಕೇಂದ್ರ ಶ್ರೀಗಳವರು ಸಾನಿಧ್ಯ ವಹಿಸಿದ್ದರು. ಮುಖ್ಯಮಂತ್ರಿಗಳಾದ ಹೆಚ್.ಡಿ. ಕುಮಾರಸ್ವಾಮಿ ಅವರು, ಉಪ ಮುಖ್ಯಮಂತ್ರಿಗಳಾದ ಬಿ.ಎಸ್. ಯಡಿಯೂರಪ್ಪ ಅವರು, ಸಂಸದರು, ಶಾಸಕರುಗಳು ಅನೇಕ ಮಠಾಧೀಶರುಗಳು, ಗಣ್ಯರುಗಳು ಸಮಾರಂಭದಲ್ಲಿ ಉಪಸ್ಥಿತರಿದ್ದರು.



ತುಮಕೂರು ಜಿಲ್ಲೆ ತುರುವೇಕೆರೆಯಲ್ಲಿ ಪರಮ ಪೂಜ್ಯರ ಗುರುವಂದನಾ ಮತ್ತು ಬಸವ ಜಯಂತಿ ಮಹೋತ್ಸವ, ಸಾಮೂಹಿಕ ವಿವಾಹ ಹಾಗೂ ಶ್ರೀ ಹೆಚ್.ಡಿ. ದೇವೇಗೌಡರ ಪ್ರತಿಮೆ ಅನಾವರಣ ಕಾರ್ಯಕ್ರಮವನ್ನು ಮುಖ್ಯ ಮಂತ್ರಿ ಶ್ರೀ ಹೆಚ್.ಡಿ. ಕುಮಾರ ಸ್ವಾಮಿ ಅವರು ಉದ್ಘಾಟಿಸಿದರು. ಜಿಲ್ಲೆಯ ಸಂಸದರು ಮತ್ತು ಶಾಸಕರುಗಳು ಹಾಗೂ ಅನೇಕ ಮಠಾಧೀಶರುಗಳು ಸಮಾರಂಭದಲ್ಲಿ ಉಪಸ್ಥಿತರಿದ್ದರು.



ಪರಮ ಪೂಜ್ಯ ಶ್ರೀ ಶ್ರೀಗಳವರು ದಿವ್ಯ ಸಾನ್ನಿಧ್ಯದಲ್ಲಿ ಕೊಡಗು ಜಿಲ್ಲೆ ವಿರಾಜಪೇಟೆಯ ಶ್ರೀ ಅರಮೇರಿ ಕಳಂಚೇರಿ ಮಠದ ಶ್ರೀ ಶ್ರೀ ಶಾಂತಮಲ್ಲ ಸ್ವಾಮಿ ವಿದ್ಯಾಪೀಠದ ನೂತನ ಶಾಲಾ ಕಟ್ಟಡದ ಸಮರ್ಪಣಾ ಸಮಾರಂಭವನ್ನು ಮಾನ್ಯ ಉಪಮುಖ್ಯಮಂತ್ರಿಗಳಾದ ಸನ್ಮಾನ್ಯ ಶ್ರೀ ಬಿ.ಎಸ್. ಯಡಿಯೂರಪ್ಪನವರು ಉದ್ಘಾಟಿಸಿದರು. ಸಂಸದರಾದ ಶ್ರೀ ಸದಾನಂದ ಗೌಡರು ಹಾಗೂ ಪೂಜ್ಯರುಗಳಾದ ಶ್ರೀ ಶಾಂತಮಲ್ಲಿಕಾರ್ಜುನ ಸ್ವಾಮಿಗಳು, ಶ್ರೀ ಮಹಾಂತ ಸ್ವಾಮಿಗಳು, ಶ್ರೀ ಸದಾಶಿವ ಸ್ವಾಮಿಗಳು, ಶಾಸಕರುಗಳು, ಅನೇಕ ಗಣ್ಯರುಗಳು ಉಪಸ್ಥಿತರಿದ್ದರು.



॥ ಓಂ ಶ್ರೀ ಗುರುಬಸವಲಿಂಗಾಯ ನಮಃ ॥

ಆವಾವ ಕಾಯಕವ ಮಾಡಿದರು ಬಸವೇಶ
ಆವಗಂ ಶರಣರನು ಸೇವಿಸೆನು ಬಸವೇಶ

# ಸಿದ್ಧಗಂಗಾ

ಸಂಪುಟ : ೪೨ ಜೂನ್ ೨೦೦೬ ಸಂಚಿಕೆ : ೬


ಸಂಪಾದಕ:
ಹೆಚ್.ವಿ. ವೀರಭದ್ರಯ್ಯ

ಸಹ ಸಂಪಾದಕ:
ಎಚ್.ಎಸ್. ಸಿದ್ಧಗಂಗಪ್ಪ

ಸಂಚಾಲಕ:
ಎಂ. ರೇಣುಕಾರಾಧ್ಯ



ಪ್ರಕಾಶಕರು:
**ಹೆಚ್.ಬಿ. ಗಂಗಾಧರಯ್ಯ**
**ಹಳೆಯ ವಿದ್ಯಾರ್ಥಿಗಳ ಸಂಘ,**
ಶ್ರೀ ಸಿದ್ಧಗಂಗಾ ಮಠ,
ತುಮಕೂರು ಜಿಲ್ಲೆ -೫೭೨ ೧೦೪.

ಮುದ್ರಕರು:
**ಶ್ರೀ ಸಿದ್ಧಲಿಂಗೇಶ್ವರಸ್ವಾಮಿ ಆಫ್‌ಸೆಟ್ ಮುದ್ರಣಾಲಯ,**
ಶ್ರೀ ಸಿದ್ಧಗಂಗಾ ಮಠ,
ತುಮಕೂರು -೫೭೨ ೧೦೪.


## ಒಳಪುಟಗಳಲ್ಲಿ ......................




| ವಿಳಾಸ : | ಚಂದಾ ವಿವರ |
| --- | --- |
| "ಸಂಪಾದಕರು", 'ಸಿದ್ಧಗಂಗಾ' ಮಾಸಪತ್ರಿಕೆ | ವಾರ್ಷಿಕ ಚಂದಾ ರೂ. ೧೦೦/- |
| ಶ್ರೀ ಸಿದ್ಧಗಂಗಾ ಮಠ, | ಆಜೀವ ಸದಸ್ಯತ್ವ ರೂ. ೧೦೦೦/- |
| ತುಮಕೂರು ಜಿಲ್ಲೆ -೫೭೨ ೧೦೪ | ಬಿಡಿ ಪ್রತಿ ರೂ. ೧೦.೦೦ |

ॐ



## ಶ್ರೀ ಸಿದ್ಧಲಿಂಗೇಶ್ವರ ವಚನ

*ರವಿಯ ಮಂಡಲದಲ್ಲಿ ಶಶಿಯ ಮೇಘದ ಸೋನೆ ಸುರಿವುತ್ತಿದೆ
ಅಗ್ನಿಯ ವರ್ಣದ ಬೀಜದಲ್ಲಿ ಐದು ವರ್ಣದ ವೃಕ್ಷ
ಹುಟ್ಟಿತ್ತು ನೋಡಿರೇ
ಆ ವೃಕ್ಷ ನಾನಾರೂಪಿನ ಫಲವ ಪ್ರಜ್ವಲಿಸುತ್ತಿದೆ ನೋಡಾ
ನಾನಾ ರೂಪಿನ ಪ್ರಜ್ವಲಾಕಾರವೇನು ಇಲ್ಲದ ಠಾವಿನಲ್ಲಿ
ವಿಶ್ರಾಂತಿಯನೆಯ್ದಿದರೆ
ನಾನು ಸ್ವಯಂಭುವಾದೆನು ಕಾಣಾ. ಏನು ಏನು ಇಲ್ಲದ
ನಿರಾಳ ನೀನು
ಮಹಾಲಿಂಗಗುರು ಶಿವಸಿದ್ಧೇಶ್ವರ ಪ್ರಭುವೇ.*

ಸ್ಥೂಲತನು ಅದು ಸಕಲರಾಗಾದಿಗಳ ಆಶ್ರಯಸ್ಥಾನ. ಅಲ್ಲಿ ಸಂಸಾರ ವಿಷಯಿಕವಾದ ಯಾಗ ಮುಂತಾದ ವಿಷಯರಸಗಳು. ಆ ವಿಷಯರಸದಿಂದಾಗಿ ರಜೋಗುಣ ಪ್ರಾಪ್ತಿ. ಅದರಿಂದಾಗಿ ಕರ್ಮಫಲ. ಅದರ ಫಲವಾಗಿ ಜನ್ಮಾಂತರದಲ್ಲಿ ಪಂಚಭೂತ ಕಾಯ ಪ್ರಾಪ್ತಿ. ಆ ದೇಹ ವೃಕ್ಷ ಯಾಗಾದಿ ಸತ್ಕ್ರಿಯೆಗಳಿಂದ ಧರ್ಮ, ಅರ್ಥ, ಕಾಮ, ಮೋಕ್ಷಗಳ ಫಲವನ್ನನುಭವಿಸುವುದು. ಆ ಫಲಾನುಭವಿ ಜೀವನಿಗೆ ಸುಜ್ಞಾನೋದಯ. ಗುರು ಕಾರುಣ್ಯಾನುಗ್ರಹಿ. ಲಿಂಗಾಂಗ ಸಂಬಂಧಿ. ಸತ್ಕ್ರಿಯಾಚಾರನಿರತ. ಅಂಗತತ್ವಗಳಿಂದ ಲಿಂಗತತ್ವಗಳನ್ನು ಹೊಂದಿ, ಜೀವಭಾವಮುಕ್ತರೆನಿಸಿ, ಯಾವುದೇ ಪ್ರಚಾರ, ಪ್ರದರ್ಶನವಿಲ್ಲದ ಪರಬ್ರಹ್ಮನಲ್ಲಿ ವಿಶ್ರಾಂತನಾಗಿರುವುದರಿಂದ ಶರಣನು ಸ್ವಯಂಭುಲಿಂಗವೆನಿಸಿದಾಗ, ತನ್ನ ಲೀಲಾಕ್ರಿಯೆಗಳೆಲ್ಲ ಲಿಂಗದಲ್ಲಿ ನಿಷ್ಪತ್ತಿಯಾಗಲು ಅಡಿ, ಮುಡಿ, ಒಡಲು, ಯಾವುದೇ ಆಘಾತವನ್ನು ಕಾಣದೆ ಇರುವ ಪರಬ್ರಹ್ಮ ಮಾತ್ರದಲ್ಲಿ ನಿತ್ಯತ್ವ ಹೊಂದಿ ಸ್ವಯಂಭುವಾಗಿದ್ದಾನೆ ಎನ್ನುತ್ತದೆ ವಚನ.

(ಕೃಪೆ : ಷಟ್‌ಸ್ಥಲಜ್ಞಾನಿ ಸೋಮಶೇಖರ ಶಿವಯೋಗಿಕೃತ ತೋಂಟದ ಸಿದ್ಧಲಿಂಗೇಶ್ವರನ ಷಟ್‌ಸ್ಥಲ ಜ್ಞಾನಿ ಜ್ಞಾನಸಾರಾಮೃತದ ಬೆಡಗಿನ ವಚನದ ಟೀಕೆ - ವೀರಶೈವ ಅಧ್ಯಯನ ಸಂಸ್ಥೆ- ಶ್ರೀ ಜಗದ್ಗುರು ತೋಂಟದಾರ್ಯ ಸಂಸ್ಥಾನ ಮಠ - ಡಂಬಳ- ಗದಗ)

## ಶ್ರೀ ಸಿದ್ಧಗಂಗಾ ಗುರುಕರುಣಾ ತ್ರಿವಿಧಿ

ಅಕ್ಷರದ ಅಂಧರಿಗೆ ಅಕ್ಕರೆಯನುಣಿಸಿದೆ
ಅಕ್ಷಯ ಪ್ರೀತಿಯ ಸೆಲೆಯಾದೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ವಿಶ್ರಾಂತಿ ನಿನಗಿಲ್ಲ ವಿಶ್ರಾಂತ ನೀನಲ್ಲ
ವಿಶ್ರಾಂತಿಯ ಕನಸ ಕಾಣಲಿಲ್ಲ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಸಂವಾದ ಸರಸತಿಯೆ ಸಾಂತ್ವನದಾಯಿಯೆ
ಸಂಕಟವ ಪರಿಹರಿಪ ಕರುಣೆಯೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಸ್ವಾಭಿಮಾನದ ತೌರೆ ಸ್ವಾರ್ಥವಿಲ್ಲದ ದೊರೆಯೆ
ಸ್ವಾತ್ಮ ವಿಶ್ವಾಸದ ಸಾಗರವೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಸರ್ವಸಮಾನತೆಯ ತತ್ವದನುಯಾಯಿಯೆ
ಸರ್ವವ ಶಿವನಾಗಿ ಕಾಣುವೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ದುಡಿದು ಜೀವಿಪರಿಗೆ ಹಡೆದವ್ವನಾಗಿರುವೆ
ತಲೆದಡವಿ ಸಲಹುವೆ ಎಡೆಬಿಡದೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಉಳ್ಳವರ ಉಳುವವರ ಸಮನಾಗಿ ಕಾಣುವೆ
ಬಲ್ಲವರ ಬಡವರನುದ್ಧರಿಸುವೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಹಸುಮಕ್ಕಳ ಉಸಿರಾದೆ ಉಣಿಸಿದೆ ನಗಿಸಿದೆ
ಕಸುಗಾಯ ರಸತುಂಬಿ ತೂಗಿದೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಒಲವಿನ ಸಿರಿದೊರೆಯೆ ಒಲವಿನ ಶಿವಚೆಲುವೆ
ಒಲವಿನೊಡಲಾಳದ ಸಿರಿಕಡಲೇ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಜಂಗಮವೆ ಜಗದೊಲವೆ ಜಂಗಮ ಕಲಶವೆ
ಇಹವ ಕೈಲಾಸವಗೈದಿರುವೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

**- ಹೆಚ್.ವಿ. ವೀರಭದ್ರಯ್ಯ**







## ಕಾಲದ ಮಹತ್ವ

*ಹಿಂದಿನ ಕಾಲದಲ್ಲಿ ಅಂದರೆ ಗುರುಕುಲ ಪದ್ಧತಿಯಿದ್ದ ದಿನಗಳಲ್ಲಿ ವಿದ್ಯಾರ್ಜನೆಗಾಗಿ ಬಂದ ವಿದ್ಯಾರ್ಥಿಗಳಿಗೆ ಊಟಕ್ಕೆ ಬೇವಿನ ಎಣ್ಣೆಯನ್ನು ತುಪ್ಪಕ್ಕೆ ಬದಲಾಗಿ ಬಡಿಸುತ್ತಿದ್ದರೆನ್ನುತ್ತಾರೆ ಹಿರಿಯರು- ವಿದ್ಯಾಕಾಂಕ್ಷಿಗಳಾಗಿ ಬಂದ ವಿದ್ಯಾರ್ಥಿಗಳಿಗೆ ಊಟ ಮುಖ್ಯವಾಗಿರಲಿಲ್ಲ. ತಮಗೆ ಬಡಿಸು ತ್ತಿರುವುದು ಏನು ಎಂಬುದರ ಅರಿವಿರುತ್ತಿರಲಿಲ್ಲ. ಊಟದ ರುಚಿಯ ಬಗ್ಗೆ ಅವರಿಗೆ ಗಮನವಿರುತ್ತಿರಲಿಲ್ಲ. ತಮಗೆ ಕಹಿ-ಸಿಹಿಗಳ ಭೇದ ಗೊತ್ತರ ಲಿಲ್ಲವೆಂದಲ್ಲ. ಅವುಗಳ ಬಗ್ಗೆ ಅವರಿಗಿದ್ದುದು ಅನಾಸಕ್ತಿ. ಆಸಕ್ತಿ ಇದ್ದುದು ತಾವು ಕಲಿಯಲು ಬಂದವರು, ಅದೊಂದೇ ತಮ್ಮ ಗುರಿ ಎಂಬ ಎಚ್ಚರ ಅವರದಾಗಿತ್ತು. ಆ 'ಎಚ್ಚರ' ದಿಂದ ಅವರೆಂದೂ ದೂರಹೋಗಲು ಇಚ್ಛಿಸುತ್ತಿರಲಿಲ್ಲ. ಒಂದು ವೇಳೆ ತಮಗೆ ಬಡಿಸಿದ ಊಟಕ್ಕೆ ಬೇವಿನೆಣ್ಣೆ ಹಾಕಿದ್ದಾರೆ ಎಂಬುದು ಹೊಳೆದದ್ದಾರೆ, ಅಂಥವರನ್ನು ಗುರುಕುಲದಿಂದ ಹೊರಗೆ ಕಳಿಸುತ್ತಿದ್ದರು. ಅವರಿಗೆ ಕಲಿಯಬೇಕೆಂಬ ಶ್ರದ್ಧೆಯಿಲ್ಲ, ಊಟಕ್ಕೆ ಏನು ಬಡಿಸಿದ್ದಾರೆ ಎಂಬುದು ಮುಖ್ಯವಾಯಿತು, ಅಂಥವರಿಂದ ಗುರುಕುಲಕ್ಕೆ ಅಪಕೀರ್ತಿ ಬರುತ್ತದೆ ಎಂಬ ಸದುದ್ದೇಶದಿಂದ ಆಶ್ರಮಗಳಿಂದ ಹೊರಹಾಕುತ್ತಿದ್ದರು.*

*ಆದರೆ, ವಿದ್ಯಾರ್ಥಿಗಳೇ, ನಿಮಗೆ ಇಂದು ಶ್ರೀಮಠದಲ್ಲಿ ಪ್ರಸಾದಕ್ಕೆ ಅಂದರೆ ಊಟಕ್ಕೆ ಬೇವಿನೆಣ್ಣೆಯನ್ನೇನೂ ನೀಡುತ್ತಿಲ್ಲ. ಉತ್ತಮ ಊಟವನ್ನೇ ನೀಡುವ ವ್ಯವಸ್ಥೆಯಿದೆ. ನಿಮ್ಮ ತಂದೆತಾಯಿಯರು, ಪೋಷಕರು, ಸಂಸ್ಥೆಯ ಮೇಲೆ ನಂಬಿಕೆಯಿಟ್ಟು ನಿಮ್ಮನ್ನಿಲ್ಲಿ ತಂದು ಬಿಟ್ಟಿದ್ದಾರೆ. ಅವರಿಗೆ ನಿಮ್ಮ ಭವಿಷ್ಯದ ಬಗ್ಗೆ ಆಶೆಯಿದೆ. ನೀವು ವಿದ್ಯಾವಂತರಾಗಿ, ಉತ್ತಮರೆನಿಸಿಕೊಂಡು, ಸ್ವಾವಲಂಬಿಗಳಾಗಿ, ಹುಟ್ಟಿದ ಮನೆಗೆ ಮತ್ತು ಊರಿಗೆ ಉಪಕಾರಿಗಳಾಗಿ ಬಾಳಬೇಕೆಂಬ ಕನಸು ಕಾಣುತ್ತಿದ್ದಾರೆ. ಆದರೆ, ನೀವು ಅದರ ಬಗ್ಗೆ ಏನು ಯೋಚನೆ ಮಾಡಿದ್ದೀರಿ? ತರಗತಿಗಳು ಪ್ರಾರಂಭವಾಗಿ ಎರಡು ವಾರಗಳಾದರೂ ತರಗತಿಗಳಿಗೆ ಹಾಜರಾಗುತ್ತಿಲ್ಲವೆಂದು ವರದಿ ಬಂದಿವೆ. ಇದಕ್ಕಿಂತ ದೊಡ್ಡ 'ದ್ರೋಹ' ಮತ್ತೊಂದಿಲ್ಲ. ನಿಮಗೆ ಹೇಳಲೇಬೇಕಾದ ಒಂದು ಮಾತಿದೆ. ಅದೆಂದರೆ ಕಾಲದ ಮಹತ್ವ. ಕಳೆದುಹೋದ ನಿಮಿಷ ನಿಮಿಷಾರ್ಧವೂ ಮತ್ತೊಂದು ನಿಮಗೆ ಸಿಕ್ಕಲಾರದು. ಕಾಲವೇ ಅಮೂಲ್ಯ ಸಂಪತ್ತು. ಅಷ್ಟೇಕೆ ಅದೇ ದೇವರು, -ಎಂದು ಭಾವಿಸಿದಾಗ ಬಾಳು ಬಂಗಾರವಾಗುತ್ತದೆ. ವ್ಯರ್ಥವಾಗಿ ಕಾಲಹರಣ ಮಾಡುವುದು ಮಹಾಪಾಪ. ಹಿರಿಯ ವಿದ್ಯಾರ್ಥಿಗಳು ಕಿರಿಯರಿಗೆ ಮಾರ್ಗದರ್ಶನ ಮಾಡಬೇಕು. ಅದು ನೀವು ಮಾಡುವ ಅತ್ಯುತ್ತಮ ಪ್ರಾರ್ಥನೆ; ಪೂಜೆ ಕೂಡಾ. ಸಂಸ್ಥೆಯ ನಿಯಮಗಳನ್ನು ನೀವೆಲ್ಲ ಪಾಲಿಸಬೇಕು. ಅದರಲ್ಲಿ ಯಾರಿಗೂ ಯಾವುದೇ ವಿಧವಾದ ವಿನಾಯಿತಿ ಇಲ್ಲ. ನಿಯಮಗಳನ್ನು ಉಲ್ಲಂಘಿಸಿದರೆ ಅಂಥವರನ್ನು ಸಂಸ್ಥೆಯಿಂದ ಹೊರಗೆ ಕಳುಹಿಸುವ ಅನಿವಾರ್ಯತೆ ಬರುತ್ತದೆ. ಅದಕ್ಕೆ ಅವಕಾಶ ಬರದಂತೆ, ನೀವೆಲ್ಲ ನಡೆದುಕೊಳ್ಳುತ್ತೇವೆ ಎಂದು ದೃಢ ಸಂಕಲ್ಪ ಮಾಡಬೇಕು. ನೋಡಿ, ನಿಮ್ಮ ಭವಿಷ್ಯ ನಿಮ್ಮ ಕೈಯಲ್ಲಿದೆ. ನಿಮ್ಮ ಶ್ರದ್ಧೆಯನ್ನವಲಂಬಿಸಿದೆ. ಅಲ್ಪ ಸುಖಕ್ಕೆ ಆಕರ್ಷಿತರಾಗಿ ಶಾಶ್ವತ ಸುಂದರ ಜೀವನವನ್ನು ಕಳೆದುಕೊಳ್ಳಬೇಡಿ. 'ಇಲ್ಲಿ ಸಲ್ಲುವಂತೆ ಬಾಳಿ. ಅಲ್ಲಿಯೂ ಸಲ್ಲುವ ಬಾಳು ನಿಮ್ಮದಾಗಲಿ'.*

*

# ಮಹಾಪೂಜೆ

ಆತ್ಮೀಯರೇ,

ನಮಸ್ಕಾರ,

ನಾಡಿನುದ್ದಕ್ಕೂ ಶ್ರೀಗಳವರ 'ಗುರುವಂದನ' ಸಮಾರಂಭಗಳು ನಡೆಯುತ್ತಿವೆ. ಎಲ್ಲೆಡೆಯಲ್ಲಿ ಜನಸಾಗರವೇ ಹರಿದು ಬರುತ್ತಿದೆ. ಒಂದೂರಿಗಿಂತ ಒಂದೂರು ವಿಶಿಷ್ಟವಾಗಿ ಸಮಾರಂಭವನ್ನು ಆಯೋಜಿಸುತ್ತಿದೆ. ಸಂಭ್ರಮ, ಸಡಗರ, ಉತ್ಸಾಹ, ಅಂದಚೆಂದಗಳಿಗೆ ಉತ್ಸವಗಳು ತೆರೆದುಕೊಳ್ಳುತ್ತಿವೆ. ಎಲ್ಲ ಕಡೆಯಲ್ಲಿಯೂ ಗಣ್ಯಮಾನ್ಯರು, ಅಧಿಕಾರಿಗಳು, ಅನುಭಾವಿಗಳು, ಶಿವಯೋಗಿಗಳು ಸದ್ಭಾವದಿಂದ ವೇದಿಕೆಯಲ್ಲಿ ವಿರಾಜಮಾನರಾಗುತ್ತಾರೆ. ಭಕ್ತಾದಿಗಳು, ಅಭಿಮಾನಿಗಳು, ಸುದ್ದಿ ಮಾಧ್ಯಮದ ಬಂಧುಗಳು ಪ್ರೀತಿಯಿಂದ ಪಾಲ್ಗೊಳ್ಳುತ್ತಾರೆ. ಸಾವಿರ ಸಾವಿರ ಸಂಖ್ಯೆಯಲ್ಲಿ ಸಮಾವೇಶಗೊಳ್ಳುತ್ತಾರೆ. ತೊಂಬತ್ತೊಂಬತ್ತರ ತುಂಬುದೀಪದ ಮಂಗಳ ಬೆಳಕಿನಂಗಳದಲ್ಲಿ ಮುನ್ನಡೆದಿರುವ ಪೂಜ್ಯ ಶ್ರೀಗಳವರನ್ನು ಕಂಡು ಅವರ ಸೇವೆಯ ಮಹತ್ವವನ್ನರಿತ, ಅನುಭವಿಸಿದ ಮಹನೀಯರು, ಮಹಿಳೆಯರು ಭಕ್ತಿ ಕುಸುಮಾಂಜಲಿಗಳನ್ನರ್ಪಿಸಿ ಧನ್ಯರಾಗುತ್ತಿರುವುದನ್ನು ಕಂಡಾಗ– 'ಹೇಳಿದರೆ ಹಾಳಾಗುವುದೋ ಅನುಭವವು; ಹೇಳದಿರೆ ತಾಳಲಾರನು ಕವಿಯು'– ಎಂಬ ರಸಋಷಿ ಕುವೆಂಪು ವಾಣಿ ನೆನಪಾಗುತ್ತದೆ.

ದಿನಾಂಕ 07-04-2006ರಂದು ಶ್ರೀಮಠದಲ್ಲಿ ಸಂಭ್ರಮಿಸಿದ ಪೂಜ್ಯ ಶ್ರೀಗಳವರ 99ನೆಯ ಜನ್ಮದಿನಾಚರಣೆ ಗುರುವಂದನ ಮಹೋತ್ಸವ ರಾಷ್ಟ್ರಪತಿ ಘನತೆವೆತ್ತ ಡಾ॥ ಎ.ಪಿ.ಜೆ. ಅಬ್ದುಲ್ ಕಲಾಂ ಅವರಿಂದ ಉದ್ಘಾಟಿತವಾಯಿತು. ಅಂದಿನಿಂದ ನಿರಂತರವಾಗಿ ರಾಜ್ಯದ ಬೇರೆ ಬೇರೆ ಕಡೆಗಳಲ್ಲಿ– ಸಕಲೇಶಪುರ ತಾಲ್ಲೂಕಿನ ಉದೇವಾರ, ದೊಡ್ಡಬಳ್ಳಾಪುರ ತಾಲ್ಲೂಕಿನ ದೇವಸಂದ್ರ, ಹೊಳೆನರಸೀಪುರ ತಾಲ್ಲೂಕಿನ ಟಿ. ಮಾಯಗೊಂಡನಹಳ್ಳಿ, ಮಾಗಡಿ ತಾಲ್ಲೂಕಿನ ಕನಕೇನಹಳ್ಳೀ, ತುಮಕೂರು ತಾಲ್ಲೂಕಿನ ಮಲ್ಲಪ್ಪನಹಳ್ಳಿ, ಸೋಮವಾರ ಪೇಟೆ ತಾಲ್ಲೂಕಿನ ಹಂಡ್ಲಿ, ಮಾಗಡಿ ತಾಲ್ಲೂಕಿನ ಹಲಸಬೆಲೆ, ಹಾಸನ ತಾಲ್ಲೂಕಿನ ಮುಕ್ಕುಂದೂರು ಹೊಸಹಳ್ಳಿ, ಕೆ.ಆರ್. ಪೇಟೆ ತಾಲ್ಲೂಕಿನ ಬಸವನಹಳ್ಳಿ, ಮಂಡ್ಯ ತಾಲ್ಲೂಕಿನ ಸುಂಡಹಳ್ಳಿ, ಮಾಗಡಿ ತಾಲ್ಲೂಕಿನ ಮುಪ್ಪೇನಹಳ್ಳಿ, ಕೋಲಾರ ತಾಲ್ಲೂಕಿನ ರಾಮಸಂದ್ರ, ಬೆಂಗಳೂರು ತಾಲ್ಲೂಕಿನ ಕಟ್ಟಹಳ್ಳಿ, ಗೌರಿಬಿದನೂರು ತಾಲ್ಲೂಕಿನ ಹೊಸೂರು, ಬೆಂಗಳೂರು ಉತ್ತರ ತಾಲ್ಲೂಕಿನ ಹುಸ್ಕೂರು, ಹಾಸನ, ಆಲೂರು ತಾಲ್ಲೂಕಿನ ರಾಯರಕೊಪ್ಪಲು, ಮಾಗಡಿ ತಾಲ್ಲೂಕಿನ ರಂಗೇನಹಳ್ಳಿ, ನೆಲಮಂಗಲ ತಾಲ್ಲೂಕಿನ ಕಂಬಾಳು ಕೊರಟಗೆರೆ ತಾಲ್ಲೂಕಿನ ಸಿಂಗ್ಲೀಹಳ್ಳಿ, ಚಾಮರಾಜನಗರ ತಾಲ್ಲೂಕಿನ ಕೊತ್ತಲವಾಡಿ, ಮಾಗಡಿ ತಾಲ್ಲೂಕಿನ ಬಿಟ್ಟಸಂದ್ರ, ಮೈಸೂರು, ರಾಯಚೂರು ಜಿಲ್ಲೆಯ ಗಂಗಾವತಿ, ಕೊಳ್ಳೆಗಾಲ ತಾಲ್ಲೂಕಿನ ಹನೂರು, ಕೆ.ಆರ್. ನಗರ, ತುರುವೇಕೆರೆಗಳಲ್ಲಿ ಗುರುವಂದನ ಸಮಾರಂಭಗಳು ನಡೆದಿವೆ.

ಹಾಸನದ್ದು ಅವಿಸ್ಮರಣೀಯ ಸಮಾರಂಭವಾಗಿ ಮೂಡಿ ಬಂದಿತು. ಅದಕ್ಕಾಗಿ ಶ್ರಮಿಸಿದ ಮಾಜಿ ಸಚಿವರೂ, ಶಾಸಕರೂ ಆದ ಸನ್ಮಾನ್ಯ ಹೆಚ್.ಡಿ. ರೇವಣ್ಣನವರು ಮತ್ತು ವೀರಶೈವ ಸಮಾಜದ ಬಂಧಿಗಳು ವಂದನೀಯರು. ವಿಶೇಷವೆಂದರೆ ಮಾಜಿ ಪ್ರಧಾನಿಗಳೂ ಗುರುಭಕ್ತಿ ಸಂಪನ್ನರೂ ಆದ ಸನ್ಮಾನ್ಯ ಶ್ರೀ ಹೆಚ್.ಡಿ. ದೇವೇಗೌಡರು ಸಮಾರಂಭದ ಅಧ್ಯಕ್ಷತೆ ವಹಿಸಿ ವ್ಯಕ್ತ ಪಡಿಸಿದ ಮೌಲಿಕ ಅಭಿಪ್ರಾಯಗಳು. ರಾಜ್ಯದ ಮುಖ್ಯಮಂತ್ರಿಗಳಾದ ಸನ್ಮಾನ್ಯ ಶ್ರೀ ಕುಮಾರಸ್ವಾಮಿಯವರು, ಉಪಮುಖ್ಯಮಂತ್ರಿಗಳಾದ ಶ್ರೀ ಬಿ.ಎಸ್. ಯಡಿಯೂರಪ್ಪನವರು ಸಮಾರಂಭದಲ್ಲಿ ಮುಖ್ಯ ಅತಿಥಿಗಳಾಗಿ ಪಾಲ್ಗೊಂಡರು ಸುತ್ತೂರು ಪೂಜ್ಯ ಜಗದ್ಗುರುಗಳು ಸಾನ್ನಿಧ್ಯ ವಹಿಸಿದ್ದರು. ಮತ್ತೊಂದು ವಿಶೇಷವೆಂದರೆ ಸಮಾರಂಭದ ಅಂಗವಾಗಿ ಏರ್ಪಡಿಸಿದ್ದ ಜಗಜ್ಯೋತಿ ಬಸವೇಶ್ವರ ನಾಟಕವನ್ನು ಮಾಜಿ ಪ್ರಧಾನಿಗಳಾದ ಸನ್ಮಾಶ್ರೀ ಹೆಚ್.ಡಿ. ದೇವೇಗೌಡರು ಸಾಮಾನ್ಯ ಪ್ರೇಕ್ಷಕರಂತೆ ಕುಳಿತು, ನೋಡಿ ತಮ್ಮ ಸಂತಸವನ್ನು ನಾಟಕದಿಂದ ಜ್ಞಾನೋದಯವಾಯಿತು ಎಂಬ ಮೆಚ್ಚಿಗೆ ಮಾತುಗಳಿಂದ ವ್ಯಕ್ತ ಪಡಿಸಿದ್ದು.

ಇದೀಗ ಶ್ರೀಮಠದಲ್ಲಿ 'ಪ್ರವೇಶ ಜಾತ್ರೆ' ನಡೆದಿದೆ. ಶ್ರೀಮಠದ ವಿವಿಧ ಶಿಕ್ಷಣ ಸಂಸ್ಥೆಗಳಲ್ಲಿ ಪ್ರವೇಶ ಪಡೆಯುವುದಕ್ಕಾಗಿ ರಾಜದೆಲ್ಲೆಡೆಗಳಿಂದ ಸಾವಿರಾರು ವಿದ್ಯಾರ್ಥಿಗಳು ಮತ್ತು ಅವರ ಪೋಷಕರು ಧಾವಿಸಿ ಬಂದಿದ್ದಾರೆ. ಮಠದಲ್ಲಿಯೇ ಮೊಕ್ಕಾಂ ಮಾಡಿದ್ದಾರೆ. ಪ್ರತಿನಿತ್ಯ ಪೂಜ್ಯ ಶ್ರೀಗಳವರು ಪ್ರತಿಯೊಬ್ಬ ವಿದ್ಯಾರ್ಥಿಯನ್ನು ಸ್ವತಃ ಅವಲೋಕಿಸಿ ಅವರವರ ಸ್ಥಿತಿಗತಿಗಳನ್ನು ಕೇಳಿ ತಿಳಿದುಕೊಂಡು, ಸಂಸ್ಥೆಯಲ್ಲಿರುವ ಸೌಲಭ್ಯಗಳ ಸ್ಥೂಲ ಪರಿಚಯಾತ್ಮಕ ಮಾತುಗಳನ್ನು ಹೇಳಿ ಅಭ್ಯರ್ಥನ ಪತ್ರದ ಮೇಲೆ 'ಅಡ್ಮಿಟ್' ಎಂದು ಆದೇಶ ನೀಡಿ ಕಳಿಸುತ್ತಾರೆ. ಸಂಖ್ಯೆ ವರ್ಷದಿಂದ ವರ್ಷಕ್ಕೆ ಹೆಚ್ಚಾಗುತ್ತಲೇ ಇದೆ. ಐದು ಸಾವಿರಕ್ಕೂ ಹೆಚ್ಚು 'ಅರ್ಜಿಗಳು' ಕಾರ್ಯಾಲಯದಿಂದ ಹೊರಗೆ ಹೋಗಿವೆ ಪ್ರವೇಶಕ್ಕಾಗಿ. ಬರುತ್ತಿರುವ ವಿದ್ಯಾರ್ಥಿಗಳು ತುಂಬಾ ಚಿಕ್ಕ ವಯಸ್ಸಿನವರಾಗಿದ್ದಾರೆ. ಶ್ರೀಗಳವರಿಗೆ ಜವಾಬ್ದಾರಿ ಹೆಚ್ಚಾಗುತ್ತಿದೆ. ಆದರೂ ಯಾರೆನ್ನೂ ನಿರಾಕರಿಸುತ್ತಿಲ್ಲ ಪೂಜ್ಯರು. ಅದು ಅವರು ಮಾಡುವ 'ಮಹಾಪೂಜೆ' ಯಾಗಿದೆ. ಹಸಿದ ಹೊಟ್ಟೆಗೆ ತುತ್ತು ಅನ್ನ ನೀಡಿ ಅಕ್ಷರ ಕಲಿಸಿ ಸತ್ಪ್ರಜೆಗಳನ್ನಾಗಿ ಮಾಡುವ ಸೇವೆಯೊಂದೇ ಪರಮಧರ್ಮ' ಎಂಬುದು ಪೂಜ್ಯ ಶ್ರೀಗಳವರ ಮಂತ್ರವಾಗಿದೆ; ಅವರು ನಡೆಸಿರುವ 'ಮಣಿಹ'ವಾಗಿದೆ.

– **ಸಂಪಾದಕ**





# ವೈಚಾರಿಕ ಕ್ರಾಂತಿ

–ಮುಂದುವರೆದುದು

–ದೇಜಗೌ, ವಿಶ್ರಾಂತ ಕುಲಪತಿಗಳು, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು.

ಇದು ಬಸವೇಶ್ವರರ ಜೀವನ ವಾಹಿನಿ ಪ್ರವಹಿಸಿದ ಮಾರ್ಗ. ಕ್ರಿಯೆಯಲ್ಲಿಯೇ ಕರ್ತೃ ಅಡಗಿರುವಂತೆ, ಸಾಧನೆ ಸಿದ್ಧಿಗಳೆಲ್ಲ ಅವರ ಜೀವನದ ಅವಿಭಾಜ್ಯಾಂಗವಾಗುತ್ತವೆ. ಕ್ರಿಯೆಯಿಲ್ಲದ ಜೀವನ ವ್ಯರ್ಥ ; ಅದೇ ಜೀವನದ ಜೀವಾಳ.

*ಯದಾ ಯದಾಹಿ ಧರ್ಮಸ್ಯ ಗ್ಲಾನಿರ್ಭವತಿ ಭಾರತ*
*ಅಭ್ಯುತ್ಥಾನಮಧರ್ಮಸ್ಯ ತದಾತ್ಮಾ ನಂ ಸೃಜಾಮ್ಯಹಂ*

ಎಂಬ ಗೀತಾಸೂಕ್ತಿಯಲ್ಲಿ ಅಡಕಗೊಂಡಿರುವ ಸತ್ಯ ಕಾಲದೇಶಗಳ ಎಲ್ಲೆಯನ್ನೂ ಮೀರಿ ನಿಂತಿದೆ. ನಿಸರ್ಗದಲ್ಲಾಗಲೀ ಸಮಾಜದಲ್ಲಾಗಲೀ ಸಮತೋಲನ ತಪ್ಪಿ, ಕ್ಷೋಭೆಯುಂಟಾದಾಗ ಅದರ ಪರಿಹಾರಕ್ಕಾಗಿ ಹೊಸ ಶಕ್ತಿಯ ಉದಯವಾಗುವುದು ನೈಜಧರ್ಮ. ಕ್ಷೋಭೆಯಿಲ್ಲದೆ, ಘರ್ಷಣೆಯಿಲ್ಲದೆ ಸೃಷ್ಟಿಕಾರ್ಯ ಸಾಧ್ಯವೇ ಇಲ್ಲ. ಮಹಾ ಕಾರ್ಯಕ್ಕೆ ಮಹಾಕಾರಣವಿರಲೇಬೇಕು. ಈ ಮಾತು ಬಸವಣ್ಣನವರ ಬಾಳಿಗೂ ಸಮುಚಿತವಾಗಿ ಅನ್ವಯಿಸುತ್ತದೆ. ತಾವು ಜನಿಸಿದ ಪರಿಸರಕ್ಕೆ ವಿರುದ್ಧವಾಗಿ ಅವರು ಸೆಟೆದೆದ್ದು ನಿಲ್ಲುತ್ತಾರೆ; ಮೌಢ್ಯ ಸಂಪ್ರದಾಯಗಳ ಮೇಲೆ ಖಡ್ಗ ಬೀಸುತ್ತಾರೆ. 'ಹರೆಯ ಹೊಯಿಸಿ ಕುರುಹ ಪೂಜಿಸುವವರ ಮೆಚ್ಚ ಕೂಡಲ ಸಂಗಮದೇವ', 'ಉಳ್ಳವರು ಶಿವಾಲಯವ ಮಾಡುವರು ನಾನೇನು ಮಾಡಲಿ ಬಡವನಯ್ಯಾ' ಎಂದು ಘೋಷಿಸಿ ಬಹು ವೇಷಭೂಷಣಗಳ, ಹಲವು ರೀತಿಯ ವಿಗ್ರಹಾರಾಧನೆಗೆ ತೆರೆಯೆಳೆಯುತ್ತಾರೆ.

*ಎಮ್ಮವರು ಬೆಸಗೊಂಡರೆ ಶುಭಲಗ್ನವೆನ್ನಿರಯ್ಯ*
*ರಾಶಿಕೂಟ ಋಣಸಂಬಂಧವುಂಟೆಂದು ಹೇಳಿರಯ್ಯ*
*ಚಂದ್ರಬಲ ತಾರಾಬಲವುಂಟೆಂದು ಹೇಳಿರಯ್ಯ*
*ನಾಳಿನದಿನಕಿಂದಿನ ದಿನ ಲೇಸೆಂದು ಹೇಳಿರಯ್ಯ*

ಎಂದು ಹೇಳಿ ಪಂಚಾಂಗ ಜ್ಯೋತಿಷ್ಯಗಳಿಗೆ ಬರೆಯೆಳೆಯುತ್ತಾರೆ. ಆದರೂ ಅವರಲ್ಲಿ ಲೋಪ ಹುಡುಕುವ ರಂಧ್ರಾನ್ವೇಷಕರು ವಿರಳವೇನಲ್ಲ. ವಿಗ್ರಹ ಭಂಜಕರಿಗೆ ಇಷ್ಟಲಿಂಗದ ಗೊಡವೆಯೇಕೆ? ಜನಿವಾರ ಹರಿದವರಿಗೆ ಶಿವದಾರದ ಗೋಜೇಕೆ? ಲಾಂಛನ ವಿರೋಧಿಗಳಿಗೆ ವಿಭೂತಿಯ ಹಂಗೇಕೆ? ವಿಚಾರಮತಿಗಳಲ್ಲಿ ಇಂಥ ಪ್ರಶ್ನೆಗಳು ಮೂಡುವುದು ಸಹಜವೇ ಸರಿ. ಬಸವಣ್ಣನವರು ಜೀರ್ಣವಾಗಿದ್ದ ರೂಢಿ ಸಂಪ್ರದಾಯಗಳನ್ನು ತಿರಸ್ಕರಿಸಿದರೇ ವಿನಾ, ಧರ್ಮದ ಅವಶ್ಯಕತೆಯನ್ನು ಮರೆಯುವುದಿಲ್ಲ. ಬಟ್ಟೆ ಹಳೆಯವಾದಾಗ ಆಚೆಗೊಗೆದು, ಹೊಸವನ್ನು ಬರವಾಡಿಕೊಳ್ಳಬೇಕಷ್ಟೆ. ಅಂತೆಯೇ ಹಳೆಯ ಧರ್ಮ ಹೊಸ ಧರ್ಮಕ್ಕೆಡೆಗೊಡದಿದ್ದರೆ ರಾಷ್ಟ್ರಜೀವನ ಕೊಳೆತು, ನಾತು, ಪೂರ್ಣವಾಗಿ ವಿನಾಶಗೊಳ್ಳುತ್ತದೆ. ಅರ್ಬುದ ವ್ರಣ ತಲೆದೋರಿದಾಗ ಶಸ್ತ್ರ ವೈದ್ಯನ ನೆರವು ಅನಿವಾರ್ಯ. ಜಗತ್ತಿನ ವಿಭೂತಿಪುರುಷರಂತೆ ಬಸವಣ್ಣನವರು ಸಹ ಪುನಸ್ಸೃಷ್ಟಿಗೆಂದು ಬಾಳು ತೇದವರೆ ಹೊರತು, ವಿನಾಶಕ್ಕಲ್ಲ. ಗುರುಲಿಂಗ ಜಂಗಮ ಹೊರತಾಗಿ ಉಳಿದ ಅಷ್ಟಾವರಣಗಳು ಇಪ್ಪತ್ತನೆಯ ಶತಮಾನದಲ್ಲಿ ಅತ್ಯಗತ್ಯವೇ ಎಂಬ ಪ್ರಶ್ನೆ ಏಳುತ್ತದೆ. ಭರತಖಂಡದ ಇಂದಿನ ಪರಿಸ್ಥಿತಿಯಲ್ಲಂತು ಏಕೇಶ್ವರವಾದ ಅನಿವಾರ್ಯವೆನಿಸಿದರೂ ಲಿಂಗಧಾರಣೆ ಐಚ್ಛಿಕವಾಗಬಾರದೇಕೆ? ಅದು ವಿಗ್ರಹದಂತಲ್ಲ, ನಿಜ. ಅದರ ಕಲ್ಪನೆಯೇ ಬೇರೆ, ವಿಗ್ರಹದ ಕಲ್ಪನೆಯೇ ಬೇರೆ ಎಂಬುದೂ ಸತ್ಯ. ಲಿಂಗ ಸವರಿಕೊಂಡು ಹೆಂಡ ಕುಡಿಯುವುದಾಗಲೀ ಅವ್ಯವಹಾರಗಳಲ್ಲಿ ತೊಡಗುವುದಾಗಲೀ ಸರಿಯೇ? ಹನ್ನೆರಡನೆಯ ಶತಮಾನದಲ್ಲಿ ಎಲ್ಲೆಲ್ಲೂ ಅಜ್ಞಾನವೇ ತುಂಬಿ ತುಳುಕುತ್ತಿದ್ದಾಗ, ಹಳೆಯ ಮತಗಳಿಂದ ಜನರನ್ನು ಆಕರ್ಷಿಸಬೇಕಾದ ಸಂದರ್ಭದಲ್ಲಿ, ನೂರಾರು ಕೆಲಸಗಳನ್ನು ಒಟ್ಟುಗೂಡಿಸಿ ಬೆಸೆಯಬೇಕಾದಾಗ, ಬಂದವರು ಮತ್ತೆ ಚದುರಿ ಹೋಗದಂತೆ, ಅವರ ಉತ್ಸಾಹ ಕುಗ್ಗದಂತೆ, ರೀತಿನೀತಿಗಳಲ್ಲಿ ಶಿಥಿಲತೆ ತಲೆದೋರದಂತೆ ವ್ಯವಸ್ಥೆಯನ್ನು ರೂಪಿಸಬೇಕಾದಾಗ ಅಷ್ಟಾವರಣಗಳು ಅನಿವಾರ್ಯವೆಂಬುದನ್ನು ಮರೆಯುವಂತಿಲ್ಲ. ಜಂಗಮನ ರೂಪದಲ್ಲಿ ಪುರೋಹಿತ ಮತ್ತೆ ಅವತರಿಸಿದ್ದಾನೆಂದು ಹೇಳಲಿಕ್ಕೂ ಅವಕಾಶವುಂಟು. ಆದರೆ ಬಸವಣ್ಣನವರ ಕಲ್ಪನೆಯ ಜಂಗಮತತ್ವದಿಂದ ಲೋಕಕ್ಕೆ ಕಲ್ಯಾಣವಾಗಬಹುದೇ ಹೊರತು, ಕಂಟಕವಾಗಲಿಕ್ಕಿಲ್ಲವೆಂದು ನಿಸ್ಸಂಶಯವಾಗಿ ಪ್ರತಿಪಾದಿಸಬಹುದು.

ಬಸವಣ್ಣನವರು ಮೂಢನಂಬಿಕೆಗಳಿಗೆ ವಿರುದ್ಧ ಬಂಡೆದ್ದರೂ, ಕಂಡೂ ಕಾಣದಂತೆ ಪೂರ್ವಸಂಸ್ಕಾರ ಅವರಲ್ಲಿ ಹೆಡೆಯೆತ್ತುವುದುಂಟು. 'ಅಂಗೈತಿಂದುದೆನ್ನ ಕಂಗಳು ಕೆತ್ತಿಹವಯ್ಯ ಬಂದಹರಯ್ಯ ಪುರಾತನರೆನ್ನ ಮನೆಗೆ' ಎಂದು ಹೇಳುವಾಗ ಅವರು ಶಕುನಗಳನ್ನು ನಂಬಿದಂತೆ ಕಾಣುತ್ತದೆ. ಶರಣರ ಆಗಮನಕ್ಕಾಗಿ ಕಾದು ಕಾದು, ಕುತೂಹಲದ ಮೊನೆಯ ಮೇಲೆ ನಿಂತು ಚಡಪಡಿಸುತ್ತಿದ್ದ ವೇಳೆಯಲ್ಲಿ ಭಾವಾವೇಗದಿಂದ ಆಡಿದ ಮಾತುಗಳಿದ್ದಿರಬಹುದು ಇವು. ಕರ್ಮತ್ರಯಗಳಲ್ಲಿ ಹಾಗೂ ಜನ್ಮಾಂತರದಲ್ಲಿ ಅವರಿಗೆ ನಂಬಿಕೆಯಿತ್ತೆಂಬುದಂತು ಸ್ಪಷ್ಟ. 'ಏಳೇಳು ಜನ್ಮದಲ್ಲಿ ಶಿವಭಕ್ತನಾಗಿ ಬಾರದಿರ್ದೊಡೆ,' 'ಹಿಂದಣ ಜನ್ಮದಲ್ಲಿ ಲಿಂಗವ ಮರೆದೆನಾಗಿ,

'ಕಾಯಕರ್ಮದ ಫಲವು,' 'ಹಿಂದೆ ನಾನಾ ಯೋನಿಯಲ್ಲಿ ಬಂದೆನೆಂಬ ಹೇಯವಿಲ್ಲ', ಬಾರದ ಭವಗಳಲ್ಲಿ ಜನಿಸಿದೆ', 'ಮುನ್ನಮಾಡಿದ ಪಾಪ ಬೆನ್ನಬಿಡದನ್ನಕ್ಕ,' 'ಶ್ವಾನಯೋನಿಯಲ್ಲಿ ಬಪ್ಪದು', 'ಅಂಜಿದರಾಗದು; ತಪ್ಪದುವ್ಯೋ ಲಲಾಟಲಿಖಿತ,' 'ಸಂಚಿತಕರ್ಮ ಉಂಡಲ್ಲದೆ ಬಿಡದು, ಪ್ರಾರಬ್ಧ ಕರ್ಮ ಭೋಗಿಸಿದಲ್ಲದೆ ಹೋಗದು'. 'ಇಂಥವೇ ಇನ್ನೂ .ಹಲವಾರು ಹೇಳಿಕೆಗಳು ಮೇಲಿನ ಮಾತನ್ನು ಸಮರ್ಥಿಸುತ್ತವೆ.

ಆಧುನಿಕ ಮಾನವನ ಮತಿಯ್ಳಲ್ಲಿ ಮೂಡುತ್ತಿರುವ ವಿಚಾರ ತರಂಗಗಳಿಗೆ ಬಸವಣ್ಣನವರ ತಪಸ್ಸೆ ಆಕರವೇನೋ ಎಂಬ ಭ್ರಮೆಯನ್ನು ಹುಟ್ಟಿಸುವಂತಿವೆ. ಅವರ ವಚನಗಳು ಅವರು ನಡೆಸಿದ ಧಾರ್ಮಿಕ ಕ್ರಾಂತಿ ವ್ಯಾಪಕತೆಯಲ್ಲಿ ಮಾರ್ಟಿನ್ ಲೂಥರನ ಕ್ರಾಂತಿಯನ್ನು ಮೀರಿಸುತ್ತದೆ. ಮಾರ್ಕ್ಸ್‌ನ ವೈಜ್ಞಾನಿಕ ಸಮಾಜವಾದದ ಕನಸನ್ನು ಮೊದಲು ಕಂಡವರು ಬಸವಣ್ಣನವರು; ಅಷ್ಟೇ ಅಲ್ಲ, ಪ್ರೇಮಾಹಿಂಸೆಗಳ ತಳಹದಿಯ ಮೇಲೆ ರಚನೆಗೊಳ್ಳಬೇಕೆಂಬ ಅವರ ಸಮಾಜವಾದ ಸಕಲ ಜೀವಾವಳಿಯ ಲೇಸನ್ನು ದೃಷ್ಟಿಯಲ್ಲಿರಿಸಿಕೊಂಡಿದೆ; ಭೂದಾನ ಶ್ರಮಾದಾನಾದಿ ಸರ್ವದಾನಗಳನ್ನೂ ಒಳಗೊಳ್ಳುತ್ತದೆ. ಅವರ ಸರಳ ಜೀವನದ ಕಲ್ಪನೆ ಸಾರಳ್ಯಕ್ಕಿಂತಲೂ ಸರಳ ಮಾತ್ರವಲ್ಲ. ಥೋರೋ ಟಾಲ್‌ಸ್ಟಾಯ್ ಓವೆನ್ ಮೊದಲಾದ ವಿಚಾರವಂತರ ಕಲ್ಪನೆಯನ್ನೂ ಮೀರಿಸುತ್ತದೆ. ಸಾಂಸ್ಕೃತಿಕ ಕ್ರಾಂತಿ ರಾಜಕೀಯ ಕ್ರಾಂತಿಗೆ ಅಥವಾ ಭದ್ರತೆಗೆ ಅಡಿಗಲ್ಲಾಗಬೇಕೆಂಬ ತತ್ವವನ್ನು ಮಾವೋಗಿಂತ ಮುಂಚೆ ಪ್ರತಿಪಾದಿಸಿದವರು ಬಸವಣ್ಣನವರು. ಇಂದು ನಾಡಿನಲ್ಲೆಲ್ಲ ಕೇಳಿಬರುತ್ತಿರುವ ಸಮಗ್ರ ಕ್ರಾಂತಿಯ ಬೀಜಾಕ್ಷರಗಳು ಬಸವಣ್ಣನವರ ವಚನಗಳಲ್ಲಿಯೇ ದೊರಕುತ್ತವೆ. ಅಷ್ಟೇ ಅಲ್ಲ, ಅವರ ಕಲ್ಪನೆಯಲ್ಲಿ ಪ್ರತಿಬಿಂಬವಾಗುತ್ತಿವೆಯೇ ಎಂಬುದನ್ನು ಕಾದುನೋಡಬೇಕಾಗಿದೆ. ಪಾರ್ಶ್ವಿಕತೆ, ಅಸಮರ್ಪಕತೆ, ಅಸರ್ವಂಕಷತೆಗಳು ಸಮಗ್ರ ಕ್ರಾಂತಿಯ ರೂಪ ಸ್ವರೂಪಗಳನ್ನು ಸಂಕುಚಿತಗೊಳಿಸುತ್ತವೆ.

ಸಮಗ್ರ ಕ್ರಾಂತಿಯ ಕಲ್ಪನೆ ಮತ್ತು ಪ್ರತಿಪಾದನೆ ಜಗತ್ತಿನಲ್ಲಿ ಪ್ರಪ್ರಥಮವಾಗಿ ಬಸವಣ್ಣನವರಿಂದಲೇ ಉಗಮಗೊಂಡುವೆಂದರೆ ಅತಿಶಯೋಕ್ತಿಯಾಗಲಾರದು. ಅವರ ಕ್ರಾಂತಿಯ ಕಲ್ಪನೆ ಸರ್ವಂಕಷವಾದುದು. ಅದು ಪ್ರವೇಶಿಸದ ಜೀವನ ಕ್ಷೇತ್ರವಿಲ್ಲ. ಅದರ ತೆಕ್ಕೆಗೊಳಗಾಗದ ವ್ಯವಹಾರಗಳಿಲ್ಲ. 'ಇಲ್ಲಿ ಸಲ್ಲುವವರು ಅಲ್ಲಿಯೂ ಸಲ್ಲು' ತ್ತಾರೆನ್ನುವ ಮಾತಿನಲ್ಲಿ ಅವರ ಈ ಮನೋಧರ್ಮ ಸುವ್ಯಕ್ತವಾಗುತ್ತದೆ. ಅವರ ದೃಷ್ಟಿಯಲ್ಲಿ ಉತ್ತಮ ಜೀವನ ಹಾಗೂ ಅಮೃತ ಜೀವನ ಎರಡೂ ಮುಖ್ಯ. ಪ್ರೇಯಸ ನಿಶ್ರೇಯಗಳೆರಡಕ್ಕೂ ಅವರು ಒತ್ತು ನೀಡುತ್ತಾರೆ. ಆದರೆ ಅವರು ಲೌಕಿಕದಲ್ಲಿ ನಿಂತಿರುವಾಗಲೂ ಅವರ ದೃಷ್ಟಿ ಮಾತ್ರ ಸದಾ ಪಾರಮಾರ್ಥಿಕತೆಯ ಕಡೆಗೆ ಚಾಚಿಕೊಂಡಿರುತ್ತದೆ. ಈಶೋಪನಿಷತ್ತಿನ 'ಈಶಾವಾಸ್ಯಮಿದಮ್ ಸರ್ವಮ್' 'ಕುರ್ವನ್ನೇವೇಹ ಕರ್ಮಾಣಿ ಜಿಜೀವಿಷೇತ್ ಶತಂ ಸಮ' ಎಂಬೀ ಮಂತ್ರಗಳಿಗೆ ಅವರ ಜೀವನ ಹಾಗೂ ಬೋಧನೆಗಳು ಪ್ರಾಮಾಣಿಕವಾದ ಭಾಷ್ಯಗಳಾಗಿವೆ. ಸಾಂಸ್ಕೃತಿಕ ಮತ್ತು ಆಧ್ಯಾತ್ಮಿಕ ಕ್ರಾಂತಿಗಳ ಮೂಲಕ ಸಮಗ್ರ ಕ್ರಾಂತಿಯನ್ನು ಸಾಧಿಸಬಹುದಾದ ಸಾಧ್ಯತೆಯನ್ನು ಮೊದಲೇ ಕಂಡುಕೊಳ್ಳುತ್ತಾರೆ. ಜನನ ಅಸ್ತಿತ್ವ ವಿಕಾಸ ಪರಿವರ್ತನೆ ಅವನತಿ ನಾಶಗಳು ಪ್ರಕೃತಿಯ ಅಥವಾ ಜಗತ್ತಿನ ಲಕ್ಷಣಗಳೆಂಬುದನ್ನವರು ಬಲ್ಲರು. ಪ್ರಕೃತಿಯನ್ನು ಗೆದ್ದು, ಆತ್ಮಕ್ಕೆ ಪಟ್ಟ ಕಟ್ಟಿದಾಗಲೇ ಸಂಸ್ಕೃತಿಯ ಅವತರಣವಾಗುತ್ತದೆಂಬುದಂತು ಅವರಿಗೆ ಪೂರ್ಣ ಖಚಿತವಾಗಿದೆ. ಪ್ರೇಯಸ್ಸು, ಪ್ರಕೃತಿ, ಶ್ರೇಯಸ್ಸು, ಸಂಸ್ಕೃತಿಯೆಂಬುದೂ ಅವರಿಗೆ ಮನವರಿಕೆಯಾಗಿದೆ. ಆದ್ದರಿಂದಲೇ ಅವರು ಧಾರ್ಮಿಕ ಕ್ರಾಂತಿಗೆ ಆದ್ಯತೆ ನೀಡುತ್ತಾರೆ. ಅದು ಫಲಿಸದಿದ್ದರೆ ಉಳಿದ ಕ್ರಾಂತಿಗಳು–ಚಿರಂತನವಾಗುಳಿಯುವುದಿಲ್ಲವೆಂದು ಎಚ್ಚರಿಸುತ್ತಾರೆ. ಬಹೀಕ್ರಾಂತಿಗೆ ಸೋಲು ಸಂಭಾವ್ಯವಾದರೂ, ಅಂತಃಕ್ರಾಂತಿಗೆ ವಿಜಯ ಮಾತ್ರ ಶತಸ್ಸಿದ್ಧ.

ಬಹಿಃಕ್ರಾಂತಿ ಸೋಲ್ತಡೇಂ
ಗೆಲ್ವುದಂತಃಕ್ರಾಂತಿ ತುದಿಗೆ!

ಆದ್ದರಿಂದಲೇ ಅಂತಃಕ್ರಾಂತಿ ಬಸವಣ್ಣನವರ ಸಮಗ್ರ ಕ್ರಾಂತಿಗೆ ತಳಹದಿಯಾಗುತ್ತದೆ, ಪ್ರಚೋದಕವಾಗುತ್ತದೆ.

ಒಟ್ಟಿನಲ್ಲಿ ಬಸವಣ್ಣನವರು ಸಾಧಿಸಿದ ಮಹತ್ವಪೂರ್ಣವಾದ ಕಾರ್ಯಗಳು ಹಲವಾರು. ಲಿಂಗದೀಕ್ಷೆಯ ಮೂಲಕ ಲಿಂಗಭೇದವಿಲ್ಲದೆ ಸರ್ವರಿಗೂ ಧರ್ಮದ ದ್ವಾರವನ್ನು ತೆರೆಯುತ್ತಾರೆ. ವರ್ಣಜಾತಿಗಳ ಮೂಲೋತ್ಪಾಟನೆಯ ಮೂಲಕ ಸ್ತ್ರೀ ಪುರುಷರಿಗೆ ಸರ್ವಕ್ಷೇತ್ರಗಳಲ್ಲಿಯೂ ಸಮಾನತೆಯ ಮಂತ್ರವನ್ನು ಹಾಡುತ್ತಾರೆ. ಕಾಯಕ ಗೌರವವನ್ನು ಎತ್ತಿ ಹಿಡಿಯುತ್ತಾರೆ. ವ್ಯಕ್ತಿ ಸ್ವಾತಂತ್ರ್ಯ ವಿಚಾರ ಸ್ವಾತಂತ್ರ್ಯಗಳಿಗೆ ಆದ್ಯತೆ ನೀಡುತ್ತಾರೆ. ಬುದ್ಧನಂತೆ ಪೂರ್ಣ ವೈರಾಗ್ಯದ ಮಾರ್ಗವನ್ನು ತೋರದೆ, ಯೇಸು ಮಹಮ್ಮದರಂತೆ ಮಾತಿನಲ್ಲಿ ಸ್ವರ್ಗ ನರಕಗಳ ದರ್ಶನವನ್ನು ಮಾಡಿಸದೆ, ಸನ್ಯಾಸಿಯಂತೆ ಗೃಹಸ್ಥನೂ ಮೋಕ್ಷಕ್ಕೆ ಅಧಿಕಾರಿ, ಸ್ವರ್ಗ ನರಕಗಳ ದರ್ಶನವನ್ನು ಮಾಡಿಸದೆ, ಸನ್ಯಾಸಿಯಂತೆ ಗೃಹಸ್ಥನೂ ಮೋಕ್ಷಕ್ಕೆ ಅಧಿಕಾರಿ, ಸ್ವರ್ಗ ನರಕಗಳು ಸತ್ತ ಮೇಲೆ ಪ್ರವೇಶಿಸಬಹುದಾದ ಲೋಕಗಳಯ್ಯಲ್ಲ, ಜೀವಂತವಾಗಿರುವಾಗಲೇ ಅನುಭವಿಸಬಹುದಾದ ವಿಷಯಗಳೆಂದು ಸ್ಪಷ್ಟಪಡಿಸುತ್ತಾರೆ. 'ಮರ್ತ್ಯಲೋಕವೆಂಬುದು ಕರ್ತಾರನ





ಕಮ್ಮಟವಯ್ಯಾ ; ಇಲ್ಲಿ ಸಲ್ಲುವವರು ಅಲ್ಲಿಯೂ ಸಲ್ಲುವರಯ್ಯಾ, ಇಲ್ಲಿ ಸಲ್ಲದವರು ಅಲ್ಲಿಯೂ ಸಲ್ಲರಯ್ಯಾ' ಎಂಬ ವಾಸ್ತವ ಸತ್ಯ ದಾರ್ಶನಿಕರಿಗೆ ಮಾತ್ರವೇ ಹೊಳೆಯುವಂಥದು. ಜಗತ್ತು ಮಾಯೆಯೆಂದು ಹೇಳಿ ಜನರನ್ನು ನಿರ್ವೀರ್ಯಗೊಳಿಸುವುದಿಲ್ಲ, ನಿರಾಶೆಗೊಳಿಸುವುದಿಲ್ಲ. ಜಿತೇಂದ್ರಿಯತ್ವ, ಸಾಮಾಜಿಕ ಸೌಹಾರ್ದತೆಗೆ ಹಾಗೂ ಶಿವಸಾಕ್ಷಾತ್ಕಾರಕ್ಕೆ ಅನುವಾದರೂ ಸಂಸಾರ ಅನಿಷ್ಟವೆಂದು ಸಾರಿದವರಲ್ಲ. ಭೋಗ ಭೂಮಿಯಲ್ಲಿದ್ದುಕೊಂಡೇ ಷಟ್ಸ್ಥಲ ಸಿದ್ಧಾಂತದ ಮೂಲಕ ಒಂದೇ ಜನ್ಮದಲ್ಲಿ ಮುಕ್ತಿ ಪಡೆಯಬಹುದೆಂಬ ವಿಶ್ವಾಸವನ್ನು ಜನರಲ್ಲಿ ಮೂಡಿಸಿ, ಯೋಗ ಭೋಗ ಸಮನ್ವಯವನ್ನು ಸಾಧಿಸುತ್ತಾರೆ.

*ಇಂದ್ರಿಯ ನಿಗ್ರಹವ ಮಾಡಿದರೆ ಹೊಂದುವುವು*
*ದೋಷಂಗಳು ;*
*ಮುಂದೆ ಬಂದು ಕಾಡುವುವು ಪಂಚೇಂದ್ರಿಯಗಳು !*
*ಸತಿಪತಿ ರತಿಸುಖವ ಬಿಟ್ಟರೆ ಸಿರಿಯಾಳ ಚಂಗಳೆಯರು*
*ಸತಿಪತಿ ರತಿಭೋಗೋಪಭೋಗವಿಲಾಸವ*
*ಬಿಟ್ಟನೇ ಸಿಂಧುಬಲ್ಲಾಳನು ?*
*ನಿಮ್ಮ ಮುಟ್ಟಿ ಪರಧನ ಪರಸತಿಯರಿಗೆಳಸಿದೊಡೆ*
*ನಿಮ್ಮ ಚರಣಕ್ಕೆ ದೂರ, ಕೂಡಲ ಸಂಗಮದೇವಾ.*

ಇದು ಬಸವಣ್ಣನವರು ಸೂಚಿಸಿದ, ನಡೆದ ಮಧ್ಯಮ ಮಾರ್ಗ. ಇದು ಕಷ್ಟದ ಮಾರ್ಗವಾದರೂ ನೈಸರ್ಗಿಕವಾದದ್ದು. ಅದರಂತೆ ದೇವಲೋಕ ಮರ್ತ್ಯಲೋಕಗಳ ಸ್ವರೂಪವನ್ನು ಸ್ಪಷ್ಟವಾಗಿ ವಿವರಿಸಿ, ಅವುಗಳ ಬಗೆಗಿನ ತೊಡಕನ್ನು ಬಿಡಿಸಿದರೇ ದುರ್ಲಭ. ಸೃಷ್ಟಿಕರ್ತ ಸೃಷ್ಟಿಯೊಳಗೆ ಲೀನವಾಗಿರುವುದು ನಿಜವಾದರೆ ದೇವಲೋಕ ಬೇರೆಲ್ಲಿದೆ? ಈ ಜಗತ್ತು ಶಿವಮಯವೋ ವಿಷ್ಣುಮಯವೋ ಅಲ್ಲವೆನ್ನುವುದಾದರೆ, ಶಿವನ ಅಸ್ತಿತ್ವದ ಬುಡವನ್ನೇ ಅಲುಗಾಡಿಸಿದಂತಾಗುತ್ತದೆ. ಅದೇನೇ ಇರಲಿ, ಭೂಮಿಯ ಮೇಲೆ ಭಗವಂತನ ರಾಜ್ಯವನ್ನು ಕಂಡು ಇತರರಿಗೂ ಅದರ ದರ್ಶನವನ್ನು ಮಾಡಿಸಿಕೊಟ್ಟ ಪುಣ್ಯ ಬಸವೇಶ್ವರರದು. ಇದು ಸಂಗಮದೇವನ ಲೋಕ; ಇದನ್ನು ಸರ್ವರೂ ಹಂಚಿಕೊಳ್ಳಿ ಎಂದು ಸೋದರಮಾನವರಿಗವರು ಕರೆ ಕೊಡುತ್ತಾರೆ. ಹಾಗೆ ಹಂಚಿಕೊಳ್ಳದಿರುವುದರಿಂದಲೇ ಜಗತ್ತು ಅಪಾಯದ ಅಂಚಿನಲ್ಲಿ ಸಾಗುತ್ತಿದೆಯೆಂದು ಪ್ರವಾದಿ ಸಂತರೆಲ್ಲ ಏಕಕಂಠದಿಂದ ಸಾರಿದ್ದಾರೆ.

ಕೆಲವು ವಿಧಿನಿಷೇಧಗಳನ್ನು ಆಚರಣೆಗಳನ್ನು ಮರೆತದ್ದಾದರೆ, ಬಸವ ಧರ್ಮ ವಿಶ್ವಧರ್ಮವಾಗಿ, ವಿಶ್ವಕಲ್ಯಾಣವನ್ನು ಸಾಧಿಸುವುದರಲ್ಲಿ ಸಂದೇಹವಿಲ್ಲ, ಏಕದೇವತೋಪಾಸನೆಯ ಮೂಲಕ ಆತ್ಮಸಾಕ್ಷಾತ್ಕಾರವೇ ಅದರ ಗುರಿ; ನೀತಿಯೇ ಅದರ ರಾಜಮಾರ್ಗ. ಪ್ರೇಮಾಹಿಂಸೆ ಸತ್ಯನಿಷ್ಠೆಗಳೇ ಅದರ ಪ್ರಾಣಶಕ್ತಿ; ಭಕ್ತಿಯೇ ಅದರ ಉಸಿರು; ಸ್ವಾತಂತ್ರ್ಯ ಸಮಾನತೆ ಸೋದರತ್ವಗಳೇ ಅದರ ನೆಲಗಟ್ಟು, ಅದು ನಡೆನುಡಿಗಳ ಸಾಮರಸ್ಯದ ಧರ್ಮ. ಅದು ಇಲ್ಲದವರ ಹಾಗೂ ಕಾಯಕಯೋಗಿಗಳ ಧರ್ಮ. ಅಸ್ಪೃಶ್ಯರನ್ನೂ ಸ್ತ್ರೀಯರನ್ನೂ ಉದ್ಧರಿಸಿದ ಧರ್ಮ. ದೇವಲೋಕವನ್ನು ಮರ್ತ್ಯಕ್ಕೆ ತಂದ ಧರ್ಮ. ಪ್ರತಿಯೊಬ್ಬರೂ ತಂತಮ್ಮ ಭಾಷೆಯ ಮೂಲಕವೇ ಮುಕ್ತಿ ಪಡೆಯಬಹುದೆಂದು ಬೋಧಿಸಿದ ಧರ್ಮ. ಪರೋಪಜೀವನವನ್ನು ಪಾಪವೆಂದು ಕರೆದು, ಸ್ವಾವಲಂಬನೆಗೆ ಸರ್ವ ಮಹತ್ವವನ್ನು ನೀಡಿದ, ವ್ಯಷ್ಟಿ ಸಮಷ್ಟಿ ಹಿತಗಳನ್ನು ಸಮನ್ವಯಗೊಳಿಸಿದ ಧರ್ಮ. ವಿಶ್ವ ಮೌಲ್ಯಗಳುಳ್ಳ ಇಂಥ ಧರ್ಮ ವಿಶ್ವ ಕುಟುಂಬದ ಸ್ಥಾಪನೆಗೆ ನೆರವಾಗದೆ?

ಯಾವುದೇ ಧರ್ಮವಾಗಲೀ ಆತ್ಮಕಲ್ಯಾಣಕ್ಕೆ ಅದೊಂದು ಮಾರ್ಗವೇ ಹೊರತು, ಗಂತವ್ಯವಲ್ಲ. ಗುರಿ ಮುಟ್ಟಿದ ನಂತರ ಸಾಧಕ ಮತಾತೀತನಾಗುತ್ತಾನೆ. ಅರಿವಿರುವತನಕ ಪೂಜೆ, ಕುಣಿತ, ಹಾಡು ; 'ಅರಿವುಗೆಟ್ಟು, ಮರವು ನಷ್ಟವಾಗಿ, ಭಾವ ನಿರ್ಭಾವವಾಗಿ ನಿಜವೊಳಕೊಂಡಿತ್ತಾಗಿ. ಅವನು ಸಂಗಮನೆ ಆಗುತ್ತಾನೆ. ಆಗವನಿಗೆ ಮತಧರ್ಮಶಾಸ್ತ್ರ ನೀತಿ ಯಾವುದೂ ಬೇಡ, ತಾವೇ ಸೃಷ್ಟಿಸಿದ ವೀರಶೈವಧರ್ಮದ ತತ್ವಗಳ ಮೂಲಕ, ಆಧ್ಯಾತ್ಮ ಸಾಧನೆಯಲ್ಲಿ ತೊಡಗಿ, ಸಿದ್ಧಿಯನ್ನು ಪಡೆದ ನಂತರ ಅವರು ಅದರಾಚೆ ನಿಲ್ಲುತ್ತಾರೆ; ನಿಂತು ಅದನ್ನು ವಿಶ್ವಧರ್ಮವಾಗಿಸುತ್ತಾರೆ. ಈಗಲೂ ಆ ಧರ್ಮ ಆ ನೆಲೆಯಲ್ಲಿಯೇ ನಿಂತಿದೆಯೇ? ಅದರ, ಅರ್ಥಾತ್ ಬಸವಣ್ಣನವರ ಸಂದೇಶಕ್ಕೆ ಬೆಲೆಯಿದೆಯೇ? ವಿಜ್ಞಾನಯುಗದಲ್ಲಿ ಅದಕ್ಕೆ ಸ್ಥಾನವಿದೆಯೆ?

ಪ್ರಶ್ನೆಯಲ್ಲಿಯೇ ಉತ್ತರ ಹುಡುಕಬಹುದಲ್ಲವೆ?

ವೈಜ್ಞಾನಿಕ ಯುಗದ ಶೋಧನೆ ಸಾಧನೆ ಸಿದ್ಧಿಗಳು ಎಂಥವರಿಗಾದರೂ ದಿಗ್ಭ್ರಮೆ ಹಿಡಿಸುವಂಥವು. ಅವುಗಳಿಗಾಗಿ ನಿಸರ್ಗ ಮಾನವನ ಕೈಂಕರ್ಯಕ್ಕೆ ಸಿದ್ಧವಾಗಿದೆ. ಹಿಂದೆಂದೂ ಕಾಣದ ಸುಖ ಸಾಧನೆಗಳನ್ನು ನೀಡಿದೆ. ಇಂದು ವಿಜ್ಞಾನಿ ಸರ್ವಸ್ವತಂತ್ರನಲ್ಲ; ರಾಜಕೀಯ ನೀತಿಗೆ ದಾಸನಾಗಿದ್ದಾನೆ. ಇಂದಿನಂತೆಯೇ ವೈಜ್ಞಾನಿಕ ನೀತಿ ಮುಂದುವರಿದದ್ದಾದರೆ, ನಿಸರ್ಗದ ಮೇಲಣ ಅತ್ಯಾಚಾರ ಮುಂದುವರಿಯುವುದಾದರೆ ಜಗತ್ತು ಎತ್ತ ಸಾಗಬಹುದೆಂಬುದನ್ನು ಭವಿಷ್ಯಜ್ಞರು, ಪ್ರವಾದಿಗಳು ಮತ್ತು ಕವಿಗಳು ಊಹಿಸಬಲ್ಲವರಾಗಿದ್ದಾರೆ. ಮಾನವ ಪ್ರಕೃತಿಯನ್ನು ವಿರೂಪಗೊಳಿಸುವ ಮತ್ತು ಅದಕ್ಕೆ ಪ್ರತಿಸ್ಪರ್ಧಿಯಾಗಿ ವಿಶ್ವಾಮಿತ್ರ ಸೃಷ್ಟಿಗೆ ಇಂಬು ಕೊಡುವ ಮೂಲಕ, ಸಮತೋಲನವನ್ನು ಕೆಡಿಸಿ, ತನ್ನ ಸಮಾಧಿಯನ್ನು ತೋಡಿಕೊಳ್ಳುತ್ತಿದ್ದಾನೆ. ಕಳೆದ ಎರಡು ಮೂರು

ದಶಕಗಳಿಂದೀಚೆಗೆ ವಿಜ್ಞಾನ, ತಂತ್ರಜ್ಞಾನ ಮತ್ತು ಕೈಗಾರಿಕಾ ಕ್ಷೇತ್ರಗಳಲ್ಲಿ ಅವು ಗಳಿಸಿರುವ ಯಶಸ್ಸಿನಿಂದಾಗ್ಗಿ ಭಯೋತ್ಪಾದಕ ಸನ್ನಿವೇಶ ಮೊಗದೋರುತ್ತಿದೆ. ಅಂತರಿಕ್ಷಕ್ಕೆ ಕಳಿಸುವ ಪ್ರಯೋಗಾಲಯ ಅಂತೆಯೇ ಬಾಹ್ಯಾಂತರಿಕ್ಷದ ಹಡಗು ಎಲ್ಲಿ ಯಾವಾಗ ಸಿಡಿದು ಬಿದ್ದು ನಗರಗಳು ಧ್ವಂಸ ವಾಗುತ್ತದೆಯೋ ಗೊತ್ತಿಲ್ಲ. ಅಣುಸ್ಥಾವರಗಳಿಂದ ಸ್ರವಿಸುವ ಶಕ್ತಿ ರಸದಿಂದ ಏನೇನನಾಹುತಗಳಾಗುತ್ತವೆಂಯೋ ಭಗವಂತನೇ ಬಲ್ಲ. ಟೈಫಾಯಿಡ್ ಖಾಯಿಲೆಗೆ ಕೊಡುವ ಆಂಟಿಬಯೋಟಿಕ್ಸ್ ಮತ್ತೊಂದು ರೋಗೋತ್ಪಾದನೆಗೆ ಕಾರಣ ವಾಗುವ ಸಾಧ್ಯತೆಯನ್ನು ವಿಜ್ಞಾನಿ ಅಲ್ಲಗಳೆದಿಲ್ಲ. ರಾಸಾಯನಿಕ ಗೊಬ್ಬರಗಳನ್ನು ಬಳಸಿ ಬೆಳೆಯುವ ಕಾಯಿಪಲ್ಲೆ ದವಸಧಾನ್ಯಗಳನ್ನು ಉಪಯೋಗಿಸುವುದರಿಂದ ತಾಯಂದಿರ ಎದೆಗಳಲ್ಲಿ ಹಾಲು ಕಡಿಮೆಯಾಗುತ್ತದೆಂದು ಹೇಳುವುದುಂಟು. ಅಂಥ ಪದಾರ್ಥಗಳ ರುಚಿ ಬದಲಾಯಿಸಿ ರುವುದಂತು ಸತ್ಯ. 1960ರ ಸುಮಾರಿನಲ್ಲಿ ವಿಯಟ್‌ನಾಮಿನಾ ಮಿಲಿಟರಿ ಆಸ್ಪತ್ರೆಯೊಂದರಲ್ಲಿ ಗಾಯಾಳುಗಳಿಗೆ ರಕ್ತಪೂರಣ ಚಿಕಿತ್ಸೆ ನಡೆಯುತ್ತಿತ್ತಂತೆ. ಈ ಚಿಕಿತ್ಸೆಗಾಗಿ ಗಾಜಿನ ಕೊಳವೆಗಳಿಗೆ ಬದಲಾಗಿ ಪ್ಲಾಸ್ಟಿಕ್ ಕೊಳವೆಗಳನ್ನು ಬಳಸ ಲಾಗಿತ್ತಂತೆ. ಚಿಕಿತ್ಸೆ ಮುಗಿದ ನಂತರವೂ ಗಾಯಾಳುಗಳ ದೇಹಸ್ಥಿತಿ ಸುಧಾರಿಸಲಿಲ್ಲ ; ಸುಧಾರಣೆಗೆ ಬದಲಾಗಿ ಅವರ ಸ್ಥಿತಿ ಉಲ್ಬಣಗೊಂಡಿತ್ತಂತೆ. ಶಾಕ್ ಲಂಗ್ (Shock Lung) ಎಂಬ ಹೊಸ ವ್ಯಾಧಿಯ ಚಿಹ್ನೆಗಳು ವೈದ್ಯರ ಕಣ್ಣಿಗೆ ಗೋಚರಿಸಿದಾಗ, ಅವುಗಳಿಗೆ ಪ್ಲಾಸ್ಟಿಕ್ ಉಪಕರಣವೇ ಕಾರಣವೆಂಬ ಸಂಗತಿ ಧೃಡಪಟ್ಟಿತು. ಹೀಗೆ ಆಧುನಿಕ ಮಾನವ ಬಳಸುತ್ತಿರುವ ನಾನಾ ಔಷಧಿಗಳು ಹೊಸ ಹೊಸ ರೋಗಗಳಿಗೂ ಸಮಸ್ಯೆಗಳಿಗೂ ಕಾರಣ ವಾಗುತ್ತವೆಂಬುದನ್ನು ವಿಜ್ಞಾನಿಗಳೇ ಒಪ್ಪಿಕೊಂಡಿದ್ದಾರೆ. ಖನಿಜಗಳ ಕೊಳೆಯಿಂದ ಭೂಗರ್ಭದೊಳಗೆ ಸಂಭವಿಸ ಬಹುದಾದ ಹಾನಿಕಾರಕ ಪರಿಣಾಮಗಳನ್ನು ಯಾರೂ ಲೆಕ್ಕ ಹಾಕಿದಂತೆ ತೋರುವುದಿಲ್ಲ. ಇಂಥ ನಿದರ್ಶನಗಳು ಅಸಂಖ್ಯ. ಅದೂ ಇರಲಿ, ತಂತ್ರ ವಿಜ್ಞಾನದ ಪ್ರಗತಿಯಿಂದ ಬಡತನ ನಿವಾರಣೆಯಾಗಿದೆಯೇ? ಸಮಸ್ಯೆಗಳು ದಿನೇ ದಿನೇ ಅಧಿಕವಾಗುತ್ತಿವೆಯಲ್ಲವೆ? ಅಂತರಿಕ್ಷದಲ್ಲಿ ಹಾರಾಡುವ ಪಕ್ಷಿಗಳ ಹಾಗೂ ನೀರಿನಲ್ಲಿ ವಾಸಿಸುತ್ತಿರುವ ಮೀನುಗಳ ವಂಶ ನಿರ್ನಾಮವಾಗಬಹುದೆಂಬ ಭಯವೂ ಇಲ್ಲದಿಲ್ಲ.

ಇಂದಿನ ಕವಿಯ ಲೇಖನಿಯಲ್ಲಿ ಇಂದಿನ ಸ್ಥಿತಿಗತಿಗಳು ಹೇಗೆ ಚಿತ್ರಣಗೊಂಡಿವೆ ಎಂಬುದನ್ನು ಗಮನಿಸಬಹುದು.

*ಕಾಲವ ದೇಶವನಳೆವರು ; ಆಕಾಶವ ತೂಗುವರು.*
*ಅತಿ ದೂರದ ನಕ್ಷತ್ರಕೆ ಕ್ಷಣಮಾತ್ರದಿ ಸಾಗುವರು.*
*ಭುವಿಗರ್ಭಕೆ ರವಿಗರ್ಭಕೆ ನಿಹಾರಿಕೆಗೂ ಹೊಕ್ಕು*
*ಸತ್ಯದ ಕರುಳನೆ ಕಿತ್ತಿದೆ ವಿಜ್ಞಾನದ ರಣಹದ್ದಿನ*
*ನೆತ್ತರು ಬಸಿಯುವ ಕೊಕ್ಕು! ನೊಣಮೀಸೆಯ ಹುಳು ಹೆಜ್ಜೆಯ*
*ಎಣಿಸುವ ಬಿಜ್ಜೆಯ ಬಲ್ಲ;*
*ತನ್ನಾತ್ಮವ ತಾನರಿಯುವ ಸಾಧನೆಯೊಂದನು ಒಲ್ಲ!*
*ಅನ್ವೇಷಣೆ ; ಅನ್ವೇಷಣೆ !*
*ಸುಖಿಸಲು ಪುರಸೊತ್ತಿಲ್ಲ ! ತಿಳಿದೂ ತಿಳಿದೂ ತಿಳಿದೂ*
*ಕಡೆಗೇನೂ ಗೊತ್ತಿಲ್ಲ.*

ಎಲ್ಲಿ ನೋಡಿದರೂ ಮಾರಕಾಸ್ತ್ರಗಳ ಬಣಬೆ ಗಗನದೆತ್ತರೆಕ್ಕೆ ಬೆಳೆಯುತ್ತಿದೆ. ರಾಷ್ಟ್ರ ರಾಷ್ಟ್ರಗಳ ನಡುವೆ ವಿನಾಶಕಾರೀ ಸ್ಪರ್ಧೆ ಭುಗಿಲಿಡುತ್ತಿದೆ. 'ಜನ ಕಂಡರೆ ಜನ ಹೆದರಿದೆ; ಎಲ್ಲೆಲ್ಲಿಯೂ ಸಂದೇಹ, ಮಾತ್ಸರ್ಯ ದೌರ್ಜನ್ಯ ದುರಾಚಾರಗಳು ತಾಂಡವ ವಾಡುತ್ತಿವೆ. ನೈತಿಕ ಮೌಲ್ಯಗಳು ತಲೆಕೆಳಗಾಗುತ್ತಿವೆ; ಕೌಟುಂಬಿಕ ಹಾಗೂ ಸಾಮಾಜಿಕ ಸಂಬಂಧಗಳು ಅಪಮಾರ್ಗ ಹಿಡಿಯುತ್ತಿವೆ. ಒಡಲಗೊಡವೆಯೊಂದೇ ಮಾನವನ ಪ್ರತಿ ನಿತ್ಯದ ಹಂಬಲ ವಾಗಿದೆ. ಹೊಟ್ಟೆಗಿಲ್ಲದೆ ತೂರಾಡುವ ಆಳುಕಾಳುಗಳ ಮೇಲೆ ಸವಾರಿ ಮಾಡುವುದು, ಹೆಮ್ಮೆಗೆ ಕೂಳನ್ನು ಬಿಸಾಡುವುದು, ಬಡವರನ್ನು ಶೋಷಣೆ ಮಾಡುವುದು– ಇವೇ ಆದರ್ಶ ಜೀವನದ ಗುರಿಯೆಂದು ಅವನು ಬಗೆದಿದ್ದಾನೆ.

ತಾಂತ್ರಿಕ ವಿಜ್ಞಾನದ ಪ್ರಾಬಲ್ಯದಿಂದಾಗಿ ಬಡವ ಕಡು ಬಡವನಾಗುತ್ತಿದ್ದಾನೆ, ಹಣವಂತ ಹೆಚ್ಚು ಹಣವಂತ ನಾಗುತ್ತಿದ್ದಾನೆ. ರಾಷ್ಟ್ರಗಳ ಪಾಡೂ ಅಷ್ಟೇ. ತೈಲ ರಾಷ್ಟ್ರಗಳ ಅಟ್ಟಹಾಸವಂತೂ ಅವರ್ಣನೀಯ. ಕನಿಕರ, ಅನುಕಂಪೆ, ಭೂತದಯೆ, ಮಾನವೀಯತೆ ಮೊದಲಾದ ಸಾತ್ವಿಕ ಗುಣಗಳಿಗೆ ಬೆಲೆಯಿಲ್ಲವಾಗಿದೆ. ವೈಜ್ಞಾನಿಕ ಪ್ರಗತಿ ತೀವ್ರವಾದಂತೆಲ್ಲ ಬುದ್ಧಿ ತೀಕ್ಷ್ಣವಾಗುತ್ತಿದೆ, ಹೃದಯ ಬರಡಾಗುತ್ತಿದೆ, ಸಕಲ ಸಮಸ್ಯೆಗಳಿಗೆ ರಾಮಬಾಣದಂತಿರುವ, ಪರಸ್ಪರ ವಿರುದ್ಧವಾದ ದ್ವಂದ್ವಗಳನ್ನು ಸಮನ್ವಯಗೊಳಿಸಿ, ಎಲ್ಲೆಲ್ಲಿಯೂ ಶಾಂತಿಯನ್ನು ತುಂಬಬಲ್ಲ ಪ್ರೇಮ ಸೌಂದರ್ಯ ಸತ್ಯಾಹಿಂಸೆಗಳಿಗೆ ಮರ್ತ್ಯ ಲೋಕದಲ್ಲಿ ಸ್ಥಳವಿಲ್ಲವೇನೋ ಎನ್ನುವಂತಾಗಿದೆ. 'ಶಾಂತಿಯ ಜಪ, ಹೃದಯದಲ್ಲಿ ರೋಷದ ತಾಪ, ಹೃದಯ ಶ್ರೀಮಂತಿಗೆ ಎರವಾದ ಭೌತಿಕ ಸಂಪತ್ತಿನಿಂದ ಜಗತ್ತಿನಲ್ಲಿ ಶುಭೋದಯ ವಾಗಲಾರದೆಂದು ಮಾನವ ಅರಿಯಬೇಕಾದ ಕಾಲವೊದಗಿದೆ. ವಿಜ್ಞಾನ ಸದಾ ಆತಂಕಕಾರಿ. ಅದು ಒಂದು ಸಮಸ್ಯೆಯನ್ನು ಬಗೆಹರಿಸುವಾಗ, ಹತ್ತನ್ನು ಸೃಷ್ಟಿಸುತ್ತದೆಂದು ಬರ್ನಾರ್ಡ್‌ಷಾ ಹೇಳಿದಂತೆ ನೆನಪು. ಆ ಮಾತು ಎಂದೆಂದಿಗೂ ನಿಜವಾಗುವಂತೆ ತೋರುತ್ತದೆ.

ತನ್ನ ಸಂಶೋಧನೆಗಳಿಂದ ಹಳೆಯ ನಂಬಿಕೆಗಳನ್ನು ಚೂರ್ಣಗೊಳಿಸಿ, ವೈಚಾರಿಕ ಕ್ಷೇತ್ರದಲ್ಲಿ ಬಿರುಗಾಳಿಯೆಬ್ಬಿಸಿ, ಜ್ಞಾನ ವಿಜ್ಞಾನಗಳ ಕ್ಷೇತ್ರದಲ್ಲಿ ಕೋಲಾಹಲವುಂಟುಮಾಡಿದ





ಸುಪ್ರಸಿದ್ಧ ಜೀವವಿಜ್ಞಾನಿ ಚಾರ್ಲ್ಸ್ ಡಾರ್ವಿನ್ ನಿರಂತರವಾದ ಏಕಮುಖವಾದ ವೈಜ್ಞಾನಿಕ ಜೀವನದ ಫಲವಾಗಿ ಹೃದಯ ದಾರಿದ್ರ್ಯ ಪ್ರಾಪ್ತವಾದ ಸಂದರ್ಭವನ್ನು ಹೃದಯವಿದ್ರಾವಕ ವಾಗಿ ತನ್ನ ಆತ್ಮ ಕಥೆಯಲ್ಲಿ ವರ್ಣಿಸಿದ್ದಾನೆ. ಅದರ ಸಂಗ್ರಹ ಭಾವಾನುವಾದ ಜ್ಞಾನ ಗರ್ವಿಗಳ ಹೃದಯವನ್ನು ಕವಿದಿರುವ ಪಾಚಿಯನ್ನು ಓಸರಿಸೀತೆಂದು ಭಾವಿಸಬಹುದಾಗಿದೆ. 'ಮೂವತ್ತು ವರ್ಷಗಳ ತನಕ ಹಲವು ಬಗೆಯ ಕಾವ್ಯ ಪ್ರಕಾರಗಳು ನನಗೆ ಆನಂದ ನೀಡಿದ್ದುಂಟು. ಶಾಲಾ ವಿದ್ಯಾರ್ಥಿಯಾಗಿದ್ದಾಗಲೇ ಶೇಕ್ಸ್‌ಪೀಯರ್‌ನ ನಾಟಕಗಳು– ಮುಖ್ಯವಾಗಿ ಐತಿಹಾಸಿಕ ನಾಟಕಗಳು– ನನ್ನ ಮನಸ್ಸಿಗೆ ಆಹ್ಲಾದವುಂಟುಮಾಡಿದ್ದವು. ಚಿತ್ರಸಂಗೀತಗಳೂ ಅಷ್ಟೇ. ಹಲವಾರು ವರ್ಷಗಳಿಂದ ಒಂದು ಕಾವ್ಯ ಪಂಕ್ತಿಯನ್ನು ಓದಿಲ್ಲ. ಇತ್ತೀಚೆಗೆ ಶೇಕ್ಸ್‌ಪಿಯರ್‌ನ ಕೃತಿಗಳನ್ನೋದಲು ಪ್ರಯತ್ನಿಸಿದೆ. ಆ ಪ್ರಯತ್ನದಿಂದ ನನಗೆ ಜುಗುಪ್ಸೆ ಉಂಟಾಗಿದೆ. ನನ್ನ ಮೆದುಳು ಮಾಹಿತಿಗಳ ರಾಶಿಯಿಂದ ವೈಜ್ಞಾನಿಕ ನಿಯಮಗಳನ್ನು ತಿಳಿಯುವ ಯಂತ್ರವಾದಂತಿದೆ. ಉಚ್ಚತಮ ರಸಿಕತೆಗೆ ಆಕರವಾದ ಮೆದುಳಿನ ಒಂದು ಭಾಗಕ್ಕೆ ಏಕೆ ಕುಟ್ಟೆ ಹಿಡಿಯಿತೋ ಕಾಣೆ.. ಈ ರುಚಿನಷ್ಟದಿಂದ ಸುಖ ಬತ್ತಿ ಹೋಗುತ್ತದೆ. ಅದರಿಂದ ಬುದ್ಧಿಗೆ ಹಾನಿಯುಂಟಾ ಗುವುದಲ್ಲದೆ, ನಮ್ಮ ಪ್ರಕೃತಿಯ ಬಹುಮುಖ್ಯ ಭಾಗವಾದ ಭಾವಕೋಶ ಕ್ಷಯಿಸಿ, ನೈತಿಕ ಚಾರಿತ್ರಕ್ಕೆ ಧಕ್ಕೆಯೊದಗಬಹುದು. ಈ ಉದ್ಧರಣೆ ದೀರ್ಘವಾದರೂ ಇಂದಿನ ಸಮಸ್ಯೆಯನ್ನು ಬಗೆಹರಿಸುವಲ್ಲಿ ಬಹುಮಟ್ಟಿಗೆ ನೆರವಾಗುತ್ತದೆಂದು ಆಶಿಸ ಬಹುದಾಗಿದೆ. ನಾವಿನ್ನೂ ನಮ್ಮ ಸಹೋದರರೊಡನೆ, ನಿಸರ್ಗದೊಡನೆ, ಮೇಲಾಗಿ ನಮ್ಮನ್ನೂ ನಿಸರ್ಗವನ್ನೂ ಸೃಷ್ಟಿಸಿರುವ ದಿವ್ಯಶಕ್ತಿಗಳೊಡನೆ ಶಾಂತಿಯಿಂದ ಬದುಕು ನಡೆಸುವ ಕಲೆಯನ್ನು ಕಲಿತಿಲ್ಲ; ಸಹಬಾಳ್ವೆ ಸಮಬಾಳುಗಳ ಪ್ರಯೋಜನವನ್ನರಿತುಕೊಂಡಿಲ್ಲ. ನಾವು ಈ ಲೋಕಕ್ಕೆ ಆಕಸ್ಮಿಕವಾಗಿ ಬಂದವರಲ್ಲ. ನಾವು ನಾವಾಗಿಯೇ ಪ್ರತ್ಯೇಕವಾಗಿ ಬಾಳುವಂತಿಲ್ಲ'. ಈ ಕಾರಣಕ್ಕಾಗಿಯೇ ನಾವು ಪ್ರಕೃತಿಯೊಡನೆ, ಸಮಾಜದೊಡನೆ, ದೈವೀಶಕ್ತಿಗಳೊಡನೆ ಸಾಮರಸ್ಯದಿಂದ ಕೂಡಿ ಬಾಳಿದ್ದಾದರೆ ಜನ್ಮ ಸಾರ್ಥಕವಾಗುತ್ತದೆ, ಲೋಕದ ಭವಿಷ್ಯ ಆಶಾದಾಯಕವಾಗುತ್ತದೆ; ನಮ್ಮ ಮುಂದಿನ ಪೀಳಿಗೆಯ ಬದುಕು ಹಸನಾಗುತ್ತದೆ, ಚೆಲುವಾಗುತ್ತದೆ.

ವಿಜ್ಞಾನಿ ಡಾರ್ವಿನ್ನನ ಪ್ರಾಮಾಣಿಕ ಭಾವನೆಗಳನ್ನು ಯಾರೂ ಅಲ್ಲಗಳೆಯುವಂತಿಲ್ಲ. ಧರ್ಮದಿಂದ ಬೇರ್ಪಟ್ಟ ವಿಜ್ಞಾನ ಆತ್ಮವಿಲ್ಲದ ಶರೀರದಂತಾಗುತ್ತದೆಂದು ಐನ್‌ಸ್ಟೀನ್ ಮೊದಲಾದ ಮೇಧಾವಿಗಳು ಮನಸಾರೆ ಒಪ್ಪಿಕೊಂಡಿದ್ದಾರೆ. ಹೃದಯವಿಲ್ಲದ ತಲೆ ಸಮಾಜಕ್ಕೆ, ರಾಷ್ಟ್ರಕ್ಕೆ ಅಪಾಯಕರ ವೆಂಬುದಕ್ಕೆ ಹಿಟ್ಲರ್ ಮೊದಲಾದ ಘಟಿಂಗರೇ ಸಾಕ್ಷಿಯಾಗಿ ದ್ದಾರೆ. ರಾಗಭಾವಗಳ ಸಂಸ್ಕರಣದ ಮೂಲಕ ಬುದ್ಧಿಯನ್ನು ಹತೋಟಿಯಲ್ಲಿಟ್ಟುಕೊಳ್ಳಬಹುದು. ಭಾವಶುದ್ಧಿಯಿಂದ ಮಾತ್ರ ಈಶ್ವರ ಸಾಕ್ಷಾತ್ಕಾರ ಸಾಧ್ಯವೆಂದು ಬಸವಣ್ಣನವರಂಥ ಋಷಿಕಲ್ಪರು ಪ್ರಾಯೋಗಿಕವಾಗಿ ತೋರಿಸಿಕೊಟ್ಟಿದ್ದಾರೆ. ಈಗ ಸಜ್ಜನರ ಜಿಹಾಸೆಗೆ ಕಾರಣವಾಗಿರುವಂಥದು ವೈಜ್ಞಾನಿಕ ಸತ್ಯವಲ್ಲ. ವೈಜ್ಞಾನಿಕ ಸಂಶೋಧನೆಯ ಪರಿಣಾಮವಗಿ ವಿಜೃಂಭಿಸುತ್ತಿರುವ ಆ ಶಕ್ತಿಯ ನಿಯಂತ್ರಣದಿಂದಲೇ ಮಾನವನಿಗೆ ಮುಕ್ತಿ, ಲೋಕಕ್ಕೆ ಕ್ಷೇಮ, ಈ ದೃಷ್ಟಿಯಿಂದ ಬಸವಣ್ಣನವರು ಬೋಧಿಸಿದ ತತ್ವಗಳು ಹಾಗೂ ಸಿದ್ಧಾಂತಗಳು ಪ್ರಸಕ್ತ ಪರಿಸ್ಥಿತಿ ಯಲ್ಲಿ ಪ್ರಪ್ರಕೃತವೆಂದೂ ಅವುಗಳ ಅನುಷ್ಠಾನ ದಿಂದ ಹೃದಯದಾರಿದ್ರ್ಯ ಹಿಂಗಿ ಮಾನವನ ದಾನವತ್ವ ವಿನಾಶಗೊಂಡು, ಶಿವಶಕ್ತಿಗಳಿಗೆ ಜಯವೊದಗಿ, ಮರ್ತ್ಯದಲ್ಲಿ ದೇವಲೋಕ ಸ್ಥಾಪನೆಯಾಗುತ್ತದೆಂದೂ ಧಾರಾಳವಾಗಿ ಹೇಳಬಹುದು.

*ಮೇಣವರಭೀಪ್ಸೆಯ ಮಹಾತ್ಮರಂ ನಮ್ಮಿಳೆಗೆ ಜನಮನದ ಶಕ್ತಿತಪ್ಪದೆಳೆತಪ್ಪುದು ಕಣಾ !*

ಬಸವಣ್ಣನವರ ಜನನ ಜೀವನ ಸಂಗತಿಗಳನ್ನು ನೋಡಿದಾಗ ಈ ಕವಿವಾಣಿ ಎಷ್ಟು ಅರ್ಥಪೂರ್ಣವಾದುದೆಂದು ತಿಳಿಯುತ್ತದೆ. ಆ ಕಾಲದ ಚರಿತ್ರೆಯ ಪೂರ್ಣ ಪರಿಚಯ ವುಳ್ಳವರಿಗೆ ಆ ಸೂಕ್ತಿಯ ಯಥಾರ್ಥತೆ ಮನದಟ್ಟಾಗದಿರದು. ಯುಗಶಕ್ತಿ ಮಹಾತ್ಮರ ಮೂಲಕ ತನ್ನ ಅಭೀಷ್ಟವನ್ನು ಪೂರೈಸಿಕೊಳ್ಳುತ್ತದೆ, ಪ್ರಾರ್ಥನೆ ತಪಸ್ಸುಗಳ ಮೂಲಕ ಜನತೆಯ ಶಕ್ತಿ ಸಾಮರ್ಥ್ಯಗಳೆಲ್ಲ ಏಕಕೇಂದ್ರಾಭಿಮುಖವಾಗಿ ಹರಿದು, ಯಾವಾಗ ಯಾವೊಬ್ಬ ವ್ಯಕ್ತಿಯಲ್ಲಿ ಒಗ್ಗೂಡುತ್ತವೆಯೋ ಆಗವನು ಮಹಾತ್ಮನಾಗುತ್ತಾನೆ; ಮಾನವನ ಉತ್ತಮ ಗುಣಗಳೆಲ್ಲ ಅವನು ಆಕರವಾಗುತ್ತಾನೆ. ದೈವಾನುಗ್ರಹ ಸಹ ಅವನಿಗೆ ಷಾಮೀಲಾ ಗುತ್ತದೆ. ಆದ್ದರಿಂದಲೇ ಅವನು ಏಕಾಂಗ ವೀರನಾಗಿ, ದುಷ್ಟಶಕ್ತಿಗಳನ್ನೆದುರಿಸಿ, ಅಜೇಯನಾಗಿ, ಸಹಸ್ರಾಕ್ಷ ಸಹಸ್ರ ಬಾಹುವಾಗಿ, ಬಹುರೂಪಿಯಾಗಿ ಕಾಣಿಸಿಕೊಳ್ಳುತ್ತಾನೆ. ಅವನ ನಡೆಯೆಲ್ಲ ನೀತಿಯಾಗುತ್ತದೆ, ನುಡಿಯೆಲ್ಲ ವೇದವಾಗುತ್ತದೆ, ಮಾಟವೆಲ್ಲ ಶಿವಮಯ ವಾಗುತ್ತದೆ.

ವ್ಯಕ್ತಿಗೆ ಸಾವುಂಟು, ಭಾವನೆಗಳಿಗೆ ಸಾವಿಲ್ಲ. ಮಹಾಪುರುಷರು ಬಿಟ್ಟು ಹೋಗುವ ಅಮೂಲ್ಯ ಆಸ್ತಿಯೆಂದರೆ ಭಾವನೆಗಳು. ಅವುಗಳ ಮೂಲಕ ಅವರು ಬದುಕುತ್ತಾರೆ. ಅವು ನಿರಂತರವಾಗಿ ಲೋಕಜೀವನವನ್ನು ತಿದ್ದುತ್ತವೆ, ಹಸನುಗೊಳಿಸುತ್ತವೆ. 'The age is reflected in ideas' ಎನ್ನುವ ಮಾತಿಗೆ ಬಸವಣ್ಣನವರ ವಚನಗಳು ಜೀವಂತ ಸಾಕ್ಷಿಗಳಾಗಿವೆ. ಯುಗಮನೋಧರ್ಮವೇ ವಚನಗಳ

ರೂಪದಲ್ಲಿ ಅಭಿವ್ಯಕ್ತಿಗೊಂಡಿವೆ. ಅಷ್ಟೇ ಅಲ್ಲ, ಅವುಗಳ ಗರ್ಭದಲ್ಲಿ ಹುದುಗಿರುವ ಭಾವನೆಗಳು ದೇಶ ಕಾಲಾತೀತವಾಗಿ, ಮನುಕುಲದ ಅಭ್ಯುದಯವನ್ನು ಸಾಧಿಸಬಲ್ಲ ಸಾಮರ್ಥ್ಯವನ್ನು ಹೊಂದಿವೆಯೆಂದರೆ ಉತ್ಪ್ರೇಕ್ಷೆಯಾಗಲಾರದು.

ಪ್ರವಾದಿಯೆಂದು, ಕಾರಣಿಕನೆಂದು, ನಂದೀಶ್ವರನ ಅವತಾರವೆಂದು, ದಾರ್ಶನಿಕನೆಂದು, ಯುಗಪ್ರವರ್ತಕನೆಂದು, ತತ್ವಜ್ಞಾನಿಯೆಂದು, ಅನುಭಾವಿಯೆಂದು, ವಿಶ್ವಧರ್ಮಸ್ಥಾಪಕನೆಂದು, ಶಿವಯೋಗಿಯೆಂದು, ಅನುಭಾವಿಯೆಂದು, ಭಕ್ತಿ ಭಂಡಾರಿಯೆಂದು, ಸಂಸಾರಯೋಗಿಯೆಂದು, ವಿಶ್ವಮಾನವನೆಂದು, ಇಚ್ಛಾಮರಣಿಯೆಂದು, ಕ್ರಾಂತಿಪುರುಷನೆಂದು, ದಲಿತೋದ್ಧಾರಕನೆಂದು, ಪವಾಡ ಪುರುಷನೆಂದು, ಸೇಶ್ವರವಾದಿಯೆಂದು, ಸಮತಾವಾದಿಯೆಂದು, ನವಸಮಾಜ ನಿರ್ಮಾಪಕನೆಂದು, ಜಾತಿವಿರೋಧಿಯೆಂದು, ಸ್ತ್ರೀ ಸ್ವಾತಂತ್ರ್ಯ ರಕ್ಷಕನೆಂದು, ಮಾನವತಾವಾದಿಯೆಂದು ಹಲವು ಜನ ಹಲವು ರೀತಿಯಲ್ಲಿ ಬಸವಣ್ಣನವರನ್ನು ಬಣ್ಣಿಸಿದ್ದಾರೆ. ಅವರು ಸಮಗ್ರ ಕ್ರಾಂತಿಯ ಪ್ರತಿಪಾದಕರಲ್ಲಿ ಪ್ರಪ್ರಥಮರೆಂಬುದನ್ನಂತು ಮರೆಯುವಂತಿಲ್ಲ. ಅವರೇನೇ ಆಗಿರಲಿ, ಜಗತ್ತಿನಲ್ಲಿಂದು ಮುಂಚೂಣಿಯಲ್ಲಿರುವ ರಾಷ್ಟ್ರಗಳು ಸುಪ್ತಾವಸ್ಥೆಯಲ್ಲಿದ್ದಾಗಲೇ ಕರ್ನಾಟಕದ ಕುಗ್ರಾಮದಲ್ಲಿ ಜನಿಸಿ, ಸಂಗಮ ಕ್ಷೇತ್ರದಲ್ಲಿ ಈಶ್ವರ ಸಾಕ್ಷಾತ್ಕಾರ ಮಾಡಿಕೊಂಡು, ವಿಶ್ವಕಲ್ಯಾಣ ಸಾಧನೆಗಾಗಿ ಕಲ್ಯಾಣವನ್ನು ಪ್ರಾಯೋಗಿಕ ಕೇಂದ್ರ ಮಾಡಿಕೊಂಡು, ಕನ್ನಡದ ಮೂಲಕ ಚಿರನೂತನವಾದ ವಿಶ್ವ ಸತ್ಯಗಳನ್ನು ಬೋಧಿಸಿ, ವಾಸ್ತವದಲ್ಲಿ ಆದರ್ಶವನ್ನು ತೋರಿ, ಮಾನವನಲ್ಲಿ ದೇವತ್ವವನ್ನು ಕಂಡು, ಜಗತ್ತಿಗೆ ದಾರಿದೀಪವಾಗಿ ಬೆಳಗಿ, ಕನ್ನಡಕ್ಕೆ, ಕನ್ನಡ ನಾಡಿಗೆ, ಕನ್ನಡಿಗರಿಗೆ, ಆ ಮೂಲಕ ಭರತಖಂಡಕ್ಕೆ ಅಜರಾಮರವಾದ ಕೀರ್ತಿಯನ್ನು ತಂದ ವಿಶ್ವವಿಭೂತಿಯೆಂದರೆ ಕನ್ನಡಿಗರಿಗೆ ಹೆಮ್ಮೆಯಾಗದಿರದು. ಅವರು ಬೋಧಿಸಿದ ಶಾಶ್ವತ ಮೌಲ್ಯಗಳ ಜತೆಗೆ, ಬಂದಳಿಕೆಗಳಂತೆ ಅಂಟಿಕೊಂಡು ಬಂದಿರುವ, ವಿಜ್ಞಾನ ಯುಗಕ್ಕೆ ವಿಪರ್ಯಾಸವೆಂಬಂತೆ, ಸಮಯವಿರೋಧಿಯೆಂಬಂತೆ ತೋರುವ ಕೆಲವು ಆಚರಣೆ ಹಾಗೂ ಬಾಹ್ಯ ಚಿಹ್ನೆಗಳನ್ನು ತೊರೆದದ್ದಾದರೆ 'ಬಸವ ಧರ್ಮ' ಲೋಕಕ್ಕೆ ತಾರಕಶಕ್ತಿಯಾಗುವುದರಲ್ಲಿ ಸಂದೇಹವಿಲ್ಲ!.

ಕಾರ್ತಿಕದ ಕತ್ತಲಲಿ ಆಕಾಶದೀಪವಾಗಿ ನೀ ಬಂದೆ,  
ಬಟ್ಟೆಗೆಟ್ಟವರಿಗೊಂದು ದೊಂದಿದಿಕ್ಕಾಗಿ  
ಎಂಟು ಶತಮಾನಗಳ ಹಿಂದೆ,  
ಅಗ್ನಿಖಡ್ಗವನಾಂತ ಓ ಆಧ್ಯಾತ್ಮ ಕ್ರಾಂತಿವೀರ  
ದೇವದಯೆಯೊಂದು ಹೇ ಧೀರಾವತಾರ,  
ಶ್ರೀ ಬಸವೇಶ್ವರಾ !  
ಜಾತಿಪದ್ಧತಿಯ ಹೋಮಕೂಪಕ್ಕೆ ಬಿದ್ದು,  
ವೈದಿಕರ ಯಜ್ಞ ತಾಪಕ್ಕೆ  
ಬಲಿವೋದ ದಲಿತ ಜೀವರನೆತ್ತಿ ಮತಿವಿಚಾರಕ್ಕೆ  
ಕಾಯಕದ ದಿವ್ಯ ತತ್ವದಾ ಸುಕ್ಷೇಮ ಧರ್ಮನಾಕಕ್ಕೆ  
ನಡೆಸಿದ ಮಹಾತ್ಮನೆ ನಿನಗೆ ನಮೋನಮಃ

ಎಂದು ಆಧುನಿಕ ಮಹಾಕವಿಯ ನಮನಗಳೊಡನೆ ಪ್ರತಿಯೊಬ್ಬ ಭಾರತೀಯನೂ, ವಿಶ್ವಕಲ್ಯಾಣಾಕಾಂಕ್ಷಿಗಳಾದ ಎಲ್ಲ ಮಾನವರೂ ದೇವರ ದಯೆಯೇ ಮೂರ್ತಿವೆತ್ತಂತಿರುವ ಆ ಮಹಾತ್ಮನಿಗೆ ಪ್ರಣಾಮ ಸಲ್ಲಿಸುವಂತಾಗಲಿ!

*

## 'ಸಿದ್ಧಗಂಗಾ' ಆಜೀವ ಸದಸ್ಯರಲ್ಲಿ ವಿನಂತಿ

ನಿಮ್ಮ ವಿಳಾಸ ಬದಲಾದಾಗ ವಿಳಾಸದಲ್ಲಿರುವ ನಂಬರ್ ತಪ್ಪದೆ ಸೂಚಿಸಿ. ಈ ಕೆಳಗಿನ ವಿಳಾಸಕ್ಕೆ ಪತ್ರ ಬರೆಯಿರಿ.

ಈ ನಂಬರ್ ಪ್ರತಿಗಳನ್ನು ರವಾನಿಸುವ ಕವರ್ ಮೇಲೆ ಇರುವ ನಿಮ್ಮ ವಿಳಾಸದಲ್ಲಿರುವುದು. ಈ ನಂಬರ್‌ಸ್ಥಿರ ನೆನಪಿನಲ್ಲಿಡಿ.

**ಪ್ರಕಾಶಕರು**  
ಸಿದ್ಧಗಂಗಾ ಮಾಸಪತ್ರಿಕೆ, ಶ್ರೀ ಸಿದ್ಧಗಂಗಾ ಮಠ,  
ತುಮಕೂರು– 572 104.

## ಓದುಗರೇ ಗಮನಿಸಿ !

ಕಳೆದ ಏಪ್ರಿಲ್ 2006 ಮತ್ತು ಮೇ 2006 ಸಂಚಿಕೆಗಳಲ್ಲಿ ಆಜೀವ ಚಂದಾ 1000/–ರೂ.ಗೆ ಬದಲಾಗಿ 600/–ರೂ ಎಂದು ತಪ್ಪಾಗಿ ಮುದ್ರಿತವಾಗಿದೆ. ಇದಕ್ಕಾಗಿ ವಿಷಾದಿಸುತ್ತೇವೆ. ಎಂದಿನಂತೆ ಪ್ರಸ್ತುತ ಆಜೀವ ಚಂದಾ 1000/–ರೂ.

– **ಪ್ರಕಾಶಕರು**





## 'ಸಿದ್ಧಗಂಗಾ' ಆಜೀವ ಸದಸ್ಯರಲ್ಲಿ ಮನವಿ

ಶ್ರೀಮಠದ ಮುಖವಾಣಿಯಾಗಿ 'ಸಿದ್ಧಗಂಗಾ' ಮಾಸಪತ್ರಿಕೆ 42ನೇ ವರ್ಷದಲ್ಲಿ ಮುನ್ನಡೆಯುತ್ತಿದ್ದು ನಾಡಿನಾದ್ಯಾಂತ ಪ್ರಸಾರ ಹೊಂದಿದೆ. ದೀರ್ಘಕಾಲದ ಮುನ್ನಡೆಗೆ ಪೂಜ್ಯ ಶ್ರೀ ಶ್ರೀಗಳವರ ಸೇವೆ ತ್ಯಾಗ ಮತ್ತು ಉದಾರತೆಯಿಂದ ನೀವು ಆಜೀವ ಸದಸ್ಯತ್ವ ಪಡೆದಿರುವುದು ಆಧಾರ ಎಂದು ಭಾವಿಸಿದೆ.

'ಸಿದ್ಧಗಂಗಾ' ಮುನ್ನಡೆಗೆ ಆರ್ಥಿಕ ಪರಿಸ್ಥಿತಿ (ಹಣಕಾಸು) ಕುಂಠಿತವಾಗಿದೆ. ಇದಕ್ಕೆ ಕಾರಣ ಆಜೀವ ಮೊತ್ತದ ನಿಶ್ಚಿತ ಠೇವಣಿಯಲ್ಲಿ ಬ್ಯಾಂಕ್ ಬಡ್ಡಿದರ ಇಳಿತ, ಮತ್ತು ಪೇಪರ್ ಮುದ್ರಣ, ಅಂಚೆವೆಚ್ಚ ದುಬಾರಿಯಾಗಿರುವುದು. ಈ ಸಮಸ್ಯೆ ನಿಮ್ಮ ಗಮನಕ್ಕೆ ತರಲಾಗುತ್ತಿದೆ.

ಈ ಪರಿಣಾಮ ಆಜೀವ ಚಂದಾವನ್ನು 2004ನೇ ವರ್ಷದಲ್ಲಿ ಶ್ರೀಶ್ರೀಗಳವರ ಅನುಮತಿ ಮೇರೆಗೆ ಸಂಘ 1000/– ರೂ. ಗೆ ನಿರ್ಧರಿಸಿತು. ಈ ತೀರ್ಮಾನದಂತೆ 1000/– ರೂ.ಗೆ ಸರಿದೂಗಿಸುವಂತೆ ಹಿಂದೆ 500/–ರೂ., 600/–ರೂ ನೀಡಿ ಆಜೀವ ಸದಸ್ಯರಾಗಿದ್ದವರು ಬಾಕಿ 500/– ರೂ., 400/–ರೂ. ಸಂದಾಯ ಮಾಡುತ್ತಿದ್ದಾರೆ.

ಈ ಉಳಿಕೆ ಹಣ 500/–ರೂ., 400/ ರೂ ಸಂದಾಯ ಮಾಡದೇ ಇರುವ ಆಜೀವ ಸದಸ್ಯರ್ರುಗಳು ಈ ಬಗ್ಗೆ ದಯಮಾಡಿ ತೀವ್ರ ಗಮನ ಹರಿಸಬೇಕಾಗಿ ಕೋರುತ್ತೇವೆ. ತಮ್ಮ ವಿಳಾಸದಲ್ಲಿರುವ LM ನಂಬರ್ ಸೂಚಿಸಿ ಕ್ಯಾಷ್/ ಎಂ.ಓ. / ಚೆಕ್/ ಡಿ.ಡಿ. ಮೂಲಕ 'ಸಿದ್ಧಗಂಗಾ' ಮಾಸಪತ್ರಿಕೆ ಹೆಸರಿನಲ್ಲಿ ಈ ಕೆಳಗಿನ ವಿಳಾಸಕ್ಕೆ ಕಳುಹಿಸಿ ಪತ್ರಿಕೆ ಚಿರಂಜೀವಿಯಾಗಿ ಮುನ್ನಡೆಯಲು ಹರಸಿ ಹಾರೈಸಬೇಕಾಗಿ ನಮ್ರ ವಿನಂತಿ.

**ಪ್ರಕಾಶಕರು**  
ಸಿದ್ಧಗಂಗಾ ಮಾಸಪತ್ರಿಕೆ, ಶ್ರೀ ಸಿದ್ಧಗಂಗಾ ಮಠ,  
ತುಮಕೂರು ಜಿಲ್ಲೆ –572 104.

## ಭೂಯ ವ್ಯಕ್ತಿತ್ವದ ಮಹಂತರು

ಹಾಸನದಲ್ಲಿ ದಿನಾಂಕ 14–05–2006ರಂದು ಶ್ರೀ ಸಿದ್ಧಗಂಗಾಮಠದ ಪೂಜ್ಯ ಶ್ರೀ ಶ್ರೀ ಶಿವಕುಮಾರ ಶಿವಯೋಗಿಗಳವರ 99ನೇ ಜನ್ಮದಿನೋತ್ಸವದ ಗುರುವಂದನ ಸಮಾರಂಭ ನಡೆಯಿತು. ಆ ಕಾರ್ಯಕ್ರಮದಲ್ಲಿ ಭಾಗವಹಿಸಿದ ಮಾಜಿ ಪ್ರಧಾನಿ ಸನ್ಮಾನ್ಯ ಶ್ರೀ ಹೆಚ್.ಡಿ. ದೇವೇಗೌಡರು ಶ್ರೀಗಳವರಿಗೆ ಭಾರತರತ್ನ ಕೊಡುವ ಬಗ್ಗೆ ಕೇಂದ್ರ ಸರ್ಕಾರದ ಜೊತೆ ಪ್ರಸ್ಥಾಪ ಮಾಡುವ ವಿಚಾರ ಮಾಡಿದಾಗ, ಪೂಜ್ಯರು ಸೇವೆಗೆ ಪುರಸ್ಕಾರ ನಿರೀಕ್ಷಿಸುವುದು ಸಲ್ಲದು ಎಂದು. ಮುಂದುವರಿದು ಶ್ರೀಮಠದಲ್ಲಿ ಅಧ್ಯಯನ ಮಾಡುತ್ತಿರುವ ಮಕ್ಕಳು ಪ್ರಸಾದ ಸ್ವೀಕರಿಸಿ, ಒಟ್ಟಾಗಿ ಎಲ್ಲರೂ ಆಡುತ್ತಿರುವುದನ್ನು ನೋಡಿದಾಗ ಅದೇ ನಮಗೆ ಕೈಲಾಸ ಅದಕ್ಕಿಂತ ಮಿಗಿಲಾದ ಪ್ರಶಸ್ತಿ ಬೇಡ ಎಂದು ವಿನಮ್ರವಾಗಿ ನಿರಾಕರಿಸಿರುವುದು ಪತ್ರಿಕೆಗಳಲ್ಲಿ ವರದಿಯಾಗಿದೆ. ಇದನ್ನು ಓದಿದಾಗ ಅವರ ವ್ಯಕ್ತಿತ್ವ ಆಕಾಶದೆತ್ತರ ಬೆಳೆಯುತ್ತಾ ಹೋಗುತ್ತದೆ.

ಇಂದು ಸಣ್ಣಪುಟ್ಟ ಪ್ರಶಸ್ತಿ ಪಡೆಯಲು ಹಲವು ರೂಪದ ಹೋರಾಟ ಮಾಡುವ ಬಹುತೇಕ ಜನರೇ ಇರುವಾಗ, ಈ ದೇಶದ ಅತ್ಯುನ್ನತ ಪ್ರಶಸ್ತಿ ಬೇಡ ಎನ್ನುವ ಜನರು ಇದ್ದಾರೆಂಬುದು ಆಶ್ಚರ್ಯದ ಸಂಗತಿ.

12ನೇ ಶತಮಾನದಲ್ಲಿ ಶರಣರು ನಡೆದು ತೋರಿದ, ಪರಿಶುದ್ಧ ಜೀವನದ ಹಾದಿಯಲ್ಲಿ ನಡೆಯುವ ವ್ಯಕ್ತಿಗಳು, ಈಗಲೂ ಇದ್ದಾರೆಂಬುದಕ್ಕೆ ಪೂಜ್ಯರನ್ನು ನೋಡಿದಾಗ ಮನವರಿಕೆಯಾಗುತ್ತದೆ, ಇಂತಹವರನ್ನೆಲ್ಲ ಕಂಡು ಜ್ಞಾನಿಗಳು 'ಮಾಡಿ ಮರೆಯೋದು ವಿರಾಗ, ಮಾಡಿ ಮೌನವಾಗಿರುವನು ದೇವರು' ಇದೇ ಶರಣರು ತೋರಿದ ಸಾಧನ ಪಥ.

ಪೂಜ್ಯರು 75 ವರ್ಷಗಳಿಂದಲೂ, ಮಾನವ್ಯದ ಉತ್ಕ್ರಾಂತಿಗೆ ತ್ರಿಕರಣ ಶುದ್ಧಿಯಾಗಿ ದಿನಕ್ಕೆ 18–20ಗಂಟೆಗಳ ಸೇವೆ ಸಲ್ಲಿಸಿ, ಮಠದಲ್ಲಿ ಪ್ರಸಾದ ನೀಡಿ, ಆಶ್ರಯ ನೀಡಿ, ಅರಿವು, ಆಚಾರ ಸಂಸ್ಕಾರ ನೀಡಿ, ಪ್ರೀತಿ, ಪ್ರೇಮದಿಂದ ಬಾಳುವ ಜೀವನಕಲೆಯನ್ನು ಲಕ್ಷ ಲಕ್ಷ ವಿದ್ಯಾರ್ಥಿಗಳಿಗೆ ಕಲಿಸಿ ಅವರುಗಳ ಬಾಳನ್ನು ಭವ್ಯ ಮಾಡಿದ್ದಾರೆ. ಪೂಜ್ಯರ ದೃಷ್ಟಿಗೆ ಬಿದ್ದವರೆಲ್ಲ ಪಾವನ ರಾಗಿದ್ದಾರೆ. ಇಂತ ಅದ್ಭುತ ಸೇವೆ ಮಾಡಿದರೂ ಅವರ ಮನದಲ್ಲಿ ಮಾಡಿದೆನೆಂಬುದಿಲ್ಲ. ಮರೆತು ವಿರಾಗಿ ಗಳಾಗಿದ್ದಾರೆ. ಮಾಡಿದ್ದಕ್ಕೆ ಪ್ರತಿ ನಿರೀಕ್ಷಣೆ ಇಲ್ಲ. ಮೌನವಾಗಿದ್ದಾರೆ. ಇದೇ 'ಭೂಯ ವ್ಯಕ್ತಿತ್ವ'. ಇಂತಹ ಮಹಂತರನ್ನು ಪಡೆದ ಸಮಾಜ ಧನ್ಯ, ನಾಡು ಧನ್ಯ, ರಾಷ್ಟ್ರ ಧನ್ಯ, ಇಡೀಯ ಮನುಕುಲವೇ ಧನ್ಯ. ಈ ಮಹಂತರಿಗೆ ಕೋಟಿ ನಮನ.

– ಬಿ.ಎಂ. ಪರಮೇಶ್ವರಪ್ಪ  
ನಿವೃತ್ತ ಕಾರ್ಯನಿರ್ವಾಹಕ ಅಭಿಯಂತರು,  
ಬಾಸೂರು, ಚಿಕ್ಕಮಗಳೂರು ಜಿಲ್ಲೆ.

# ವಚನ ಪಿತಾಮಹ ಹಳಕಟ್ಟಿ ಫಕೀರಪ್ಪನವರು

- ವಿ.ಟಿ.ಎಸ್. ರಾವ್
ನಂ.೨೪, ಆರನೆಯ ಮುಖ್ಯರಸ್ತೆ, ಎರಡನೆಯ ಬ್ಲಾಕ್, ರವೀಂದ್ರನಾಥ್ ಟಾಗೋರ್ ನಗರ, ಬೆಂಗಳೂರು-೫೬೦ ೦೨೦.

ದಿವಂಗತ ಫ.ಗು. ಹಳಕಟ್ಟಿ ಫಕೀರಪ್ಪನವರು ಕನ್ನಡ ನಾಡಿನ ಕಾರಣ ಪುರುಷರಲ್ಲಿ ಒಬ್ಬರು. 02-07-1880ರಲ್ಲಿ ಧಾರವಾಡದಲ್ಲಿ ಜನಿಸಿದ ಇವರು ವಕೀಲಿ ವೃತ್ತಿಯನ್ನು ಆರಂಭಿಸಿದ್ದು ಬೆಳಗಾವಿಯಲ್ಲಿ ನೆಲೆಯೂರಿ ನಿಂತದ್ದು ಬಿಜಾಪುರದಲ್ಲಿ. ಬಿಜಾಪುರವು ಅವರ ಕರ್ಮಭೂಮಿ ಹಾಗೂ ಪುಣ್ಯ ಭೂಮಿಯಾಯಿತು. ಅವರ ತಂದೆ ಗುರುಬಸಪ್ಪನವರು ಪ್ರಾಥಮಿಕ ಶಾಲಾ ಶಿಕ್ಷಕರು, ಹಳೆ ಸಂಪ್ರದಾಯದ ಶಾಲಾ ಶಿಕ್ಷಕರು, ಮಕ್ಕಳ ವಿದ್ಯಾಭ್ಯಾಸ ಸದಾಚಾರಗಳ ಬಗೆಗೆ ವಿಶೇಷ ಕಾಳಜಿ ವಹಿಸುತ್ತಿದ್ದವರು. ಅಂತೆಯೇ ವಿದ್ವಾಂಸರು ಸದಾಚಾರಿಗಳು ನಾಡಿನ ಸಾಮಾಜಿಕ ಜೀವನದಲ್ಲಿ ಪ್ರತಿಷ್ಠಿತರಾದ ಹಲವರು ಪ್ರಾಥಮಿಕ ಶಾಲಾ ಶಿಕ್ಷಕರಾಗಿರುವುದನ್ನು ನಾವು ಕಂಡಿದ್ದೇವೆ.

ಗುರುಬಸಪ್ಪನವರದು ಬಡತನದ ಮನೆತನ ಆದರೂ ಅವರು ವಿದ್ಯೆ, ಸಾಹಿತ್ಯ, ಸಂಸ್ಕೃತಿಯ ಪ್ರೇಮಿಗಳಾಗಿದ್ದವರು. ಹಳಕಟ್ಟಿಯವರ ಕುರಿತು ಈಶ್ವರ ಸಣಕಲ್ಲ ಅವರು ಈ ರೀತಿ ಹಾಡಿರುವವರು. 'ಏನು ಎನೂ ಇಲ್ಲದ ಘನ ಫಕೀರ ಸೂರೆಗೈದೆಯೊ ಜಗಕೆ ವಚನ ಭಂಡಾರ'. ಧಾರವಾಡದ ಬಾಸಲ್ ಮಿಷಿನ್ ಹೈಸ್ಕೂಲ್‌ನಲ್ಲಿ ಮತ್ತು ಮುಂಬಯಿಯ ಕ್ಸೇವಿಯರ್ ಕಾಲೇಜಿನಲ್ಲಿ ವಿದ್ಯಾಭ್ಯಾಸ ನಡೆಯಿತು. ಮಿಷಿನರಿ ವಿದ್ಯಾಲಯಗಳಲ್ಲಿ ಹಿಂದಿನ ಶಿಸ್ತು ವ್ಯಾಸಂಗ ನಿಷ್ಠೆ, ಸೇವಾ ಮನೋಭಾವಗಳನ್ನು ಪ್ರೇರೇಪಿಸುವುದಕ್ಕೆ ಹೆಚ್ಚಿನ ಗಮನ ಕೊಡುತ್ತಿದ್ದರು. ಮುಂಬಯಿನ ಸ್ಸೇವಿಯರ್ ಕಾಲೇಜಿನ ಅಧ್ಯಾಪಕರೆಲ್ಲಾ ವಿರಕ್ತರಾಗಿದ್ದು ತಮ್ಮ ಬಾಳನ್ನು ವಿದ್ಯಾಭ್ಯಾಸ ಸಂಶೋಧನೆಗೆ ಮೀಸಲಾಗಿಡುತ್ತಿದ್ದರು. ಇಂತಹವರ ಪರಿಸರ ಪ್ರಭಾವ ಹಳಕಟ್ಟಿಯವರ ಮೇಲೆ ಬಿದ್ದಿರಬೇಕು.

ಅವರು ಸೇವಾ ಮನೋಭಾವದಿಂದ ಎಲ್.ಎಲ್.ಬಿ. ವರ್ಗಕ್ಕೆ ಸೇರಿ ವಿದ್ಯಾಭ್ಯಾಸ ಮುಂದುವರೆಸಿದರು. ಧಾರವಾಡದಲ್ಲಿ ಕನ್ನಡದ ಕಂಪು ಬೀರಿದ ಡೆಪ್ಯುಟಿ ಚೆನ್ನಬಸಪ್ಪನವರ ಅವಿರತ ಪ್ರಯತ್ನದಿಂದ ಮತ್ತು ತಮ್ಮ ತಂದೆಯವರಿಂದ ಕನ್ನಡ ಪ್ರೇಮವನ್ನು ಬೆಳೆಸಿಕೊಂಡಿದ್ದ ಹಳಕಟ್ಟಿಯವರು ಕನ್ನಡ ಸಾಹಿತ್ಯದ ವ್ಯಾಸಂಗವನ್ನು ಕೈಗೊಂಡರು. ಒಬ್ಬ ವೀರಶೈವ ಸದ್‌ಗೃಹಸ್ಥರ ಮನೆಯಲ್ಲಿ ಭೋಜನ ಕೂಟದ ಏರ್ಪಾಡಾಯಿತು. ಎಲ್ಲರು ಬಂದಿದ್ದರಾದರು ಹಳಕಟ್ಟಿಯವರು ಕಾಣಲಿಲ್ಲ. ಆ ಮನೆಯಲ್ಲಿಯೇ ಸಾಹಿತ್ಯದ ಕೈಬರಹದ ಕಟ್ಟುಗಳನ್ನು ನಿರೀಕ್ಷಿಸುವುದರಲ್ಲಿ ಮಗ್ನರಾಗಿದ್ದ ಅವರು ಊಟವನ್ನೇ ಮರೆತಿದ್ದರು ಇದು ನಡೆದದ್ದು 1903ರಲ್ಲಿ ಅಂದರೆ 61 ವರ್ಷಗಳವರೆಗೆ ಒಂದೇ ಮನದಿಂದ ಅವರು ವಚನ ಸಾಹಿತ್ಯದ ವ್ಯಾಸಂಗವನ್ನು ಕೈಗೊಂಡಿದ್ದರು. 1904ರಲ್ಲಿ ಅವರ ಗಮನ ತಾಡವಲಿ ಗ್ರಂಥಗಳತ್ತ ಹರಿಯಿತು. ಸುಲಭವಲ್ಲದ ಈ ಕಾರ್ಯವನ್ನು ಅವರು ನಿಷ್ಠೆಯಿಂದ ನಡೆಸಿದರು. 1920ರ ವೇಳೆಗೆ ಸಾವಿರಾರು ಗ್ರಂಥಗಳನ್ನು ಕಟ್ಟುಗಳಲ್ಲಿಯ ವಚನಗಳನ್ನು ಕ್ರಮವಾಗಿ ಹೊಂದಿಸುವ ಕಾರ್ಯವನ್ನು ಅವರು ಕೈಗೊಂಡರು. ಸರ್ಕಾರ, ಯು.ಜಿ.ಸಿ. ಸಾರ್ವಜನಿಕ ಸಂಸ್ಥೆಗಳ ಯವ ನೆರವೂ ಸಿಕ್ಕದ ಆ ಕಾಲದಲ್ಲಿ ವಚನ ಸಾಹಿತ್ಯ ಹರಿಸದೆಯಿದ್ದ ಆ ಕಾಲದಲ್ಲಿ ಹಳಕಟ್ಟಿಯವರು ಕಾರ್ಯ ಅತ್ಯಂತ ಶ್ಲಾಘನೀಯುವಾದದ್ದು. 1926ರಲ್ಲಿ ಹಿತಚಿಂತಕ ಮುದ್ರಣಾಲಯ ಸ್ಥಾಪಿತವಾಯಿತು, ವಚನ ಸಾಹಿತ್ಯ ಕೃತಿಗಳನ್ನು ಕ್ರಮಶಃ ತಾವೇ ಪ್ರಕಟಿಸುವ ದೃಷ್ಟಿಯಿಂದ ಪತ್ರಿಕೆ ಪ್ರಾರಂಭಿಸಿದರು. ಆ ಪತ್ರಿಕೆ ಶ್ರೇಷ್ಠ ಸ್ಥಾನವನ್ನು ಗಳಿಸಿತು. ವೀರಶೈವ ಕವಿಗಳ ಕಾವ್ಯಗಳು, ವೀರಶೈವ ಧರ್ಮ, ಸಂಸ್ಕೃತಿ, ವೀರಶೈವ ಅರಸು ಮನೆತನದವರು, ವೀರಶೈವ ಶಿವಶರಣರ ಚರಿತ್ರೆಗಳು ಇತ್ಯಾದಿ ನೂರಾರು ಕೃತಿಗಳು ಬೆಳಕಿಗೆ ಬಂದವು. ನೂರಾರು ಹೊಸ ಲೇಖಕರು ಬೆಳಕಿಗೆ ಬಂದರು. ಪೂಜ್ಯ ಶ್ರೀ ಹಳಕಟ್ಟಿಯುವರು ಸ್ವಾರ್ಥಕ್ಕಾಗಿ ಬದುಕಿದವರಲ್ಲ. ಪರಹಿತಕ್ಕಾಗಿ ಜೀವಿಸಿದವರು. ನಾಡಿನ ಏಳಿಗೆಗಾಗಿ, ಸಾಹಿತ್ಯದ ಉಳಿವಿಗಾಗಿ ದುಡಿದ ಮಹಂತರು, ಅವರದು ವೈವಿಧ್ಯಮಯ ಬಾಳು. ಸಾಹಿತ್ಯ ಸೇವೆ, ಅವರ ವರ್ಣಮಯ ಬದುಕಿನ ಒಂದು ಮುಖ. ವೀರಶೈವ ಸಾಹಿತ್ಯ ಪ್ರಕಟನೆಗಾಗಿ ಅವರು ಪಟ್ಟ ಪರಿಶ್ರಮ ಅಷ್ಟಿಷ್ಟಲ್ಲ ಅವರ ಅವಿರತ ಪರಿಶ್ರಮದ ಫಲವಾಗಿ ಸುಮಾರು 68ಕ್ಕೂ ಮಿಕ್ಕಿ ಗ್ರಂಥಗಳು ಬೆಳಕು ಕಂಡಿವೆ. ಇವುಗಳಲ್ಲಿ ಬಹು ಸಂಖ್ಯಾತ ಗ್ರಂಥಗಳನ್ನು ಅವರು ಸಂಪಾದಿಸಿ, ಸಂಸ್ಕರಿಸಿ, ಪ್ರಸ್ತಾವನೆಗಳೊಂದಿಗೆ ಪ್ರಕಟಿಸಿರುವರು. ಇನ್ನುಳಿದವು ಸ್ವರಚಿತ ಕೃತಿಗಳು.

ಭೂಮಿಯನ್ನು ಅಗೆದು ಪರ್ವತವನ್ನು ಕೊರೆದು ಬೆಲೆಯುಳ್ಳ ಬಂಗಾರದ ಅದಿರನ್ನು ಹೊರತೆಗೆದಂತೆ ಅವರು ವೀರಶೈವ ಗ್ರಂಥರಾಶಿಯನ್ನು ಬಯಲಿಗೆ ತಂದರು. ತಮ್ಮ ವೈಯಕ್ತಿಕ ಶ್ರಮದ ಕುಪ್ಪೆಯಲ್ಲಿ ಕಾಯಿಸಿ ಚಿನ್ನದಂಥ ಸಾಹಿತ್ಯ ಕೃತಿಗಳನ್ನು ಮುದ್ರಣ ಮಾಡಿದರು. ನಾಡಿನ ಜನತೆಯಲ್ಲಿ





ಪ್ರಚಾರ ಮಾಡಿದರು. ಹೀಗೆ ಅವರು ಪ್ರಕಟಿಸಿದ್ದ ಗ್ರಂಥ ಇಷ್ಟೆ ಎಂದು ನಿಖರವಾಗಿ ಹೇಳುವುದು ಇಂದು ಬಹಳ ಕಷ್ಟವಾಗಿದೆ.

ಹಳಕಟ್ಟಿಯವರು ಬಡತನದ ಬಾಳನ್ನೆ ಬಾಳಿದರು. ಶಿವಾನುಭವದ ಪತ್ರಿಕೆಯ ಆರ್ಥಿಕ ಸ್ಥಿತಿ ಚೆನ್ನಾಗಿರಲಿಲ್ಲ ಅವರು ನಿಷ್ಠೆಯಿಂದ ಜಿಗುಟುತನದಿಂದ ಪತ್ರಿಕೆ ನಡೆಸಿದರು. ಈಗಲೂ ನಮ್ಮ ನಾಡಿನ ಹಲವು ವಿದ್ವಾಂಸರು ಹಳಕಟ್ಟಿಯವರ ವ್ಯಾಸಂಗದಿಂದ ಪ್ರೇರಿತರಾಗಿದ್ದಾರೆ. ಹೀಗೆ ಹಳಕಟ್ಟಿಯವರು ವಚನ ಪಿತಾಮಹರೆನಿಸಿಕೊಂಡು ಗುರು ಸ್ವರೂಪರಾಗಿದ್ದಾರೆ. ಈಗಲೂ ಅವರು ಸ್ಥಾಪಿಸಿದ ಸಿದ್ಧೇಶ್ವರ ವಿದ್ಯಾಸಂಸ್ಥೆಯು ವಿದ್ಯಾದಾನದಲ್ಲಿ ನಿರತವಾಗಿದೆ. ಅವರು ಸ್ಥಾಪಿಸಿದ ಸಿದ್ಧೇಶ್ವರ ಬ್ಯಾಂಕು ಆರ್ಥಿಕ ಕ್ಷೇತ್ರದಲ್ಲಿ ಮಹತ್ವದ ಪಾತ್ರ ನಿರ್ವಹಿಸುತ್ತಿದೆ. ಅವರು ಧರ್ಮಪ್ರಚಾರ ಸಭೆಯನ್ನು ಸ್ಥಾಪಿಸಿದರು. ಬರಗಾಲ ನಿವಾರಣಾ ಸಂಸ್ಥೆಯ ಪದಾಧಿಕಾರಿಗಳಾಗಿದ್ದರು. ಕರ್ನಾಟಕ ಏಕೀಕರಣ ಪರಿಷತ್ತನ್ನು ಸ್ಥಾಪಿಸಿದರು. ಕನ್ನಡ ಸಾಹಿತ್ಯ ಪರಿಷತ್ತನ್ನು ಸ್ಥಾಪಿಸಿದರು. ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷರಾಗಿದ್ದರು. ಬಿಜಾಪುರದ ಮರಾಠಿ ಮಿಶ್ರಿತ ಪ್ರದೇಶಗಳಲ್ಲಿ ಕನ್ನಡ ಶಾಲೆಗಳನ್ನು ತೆರೆದರು. ಕರ್ನಾಟಕ ವಿಶ್ವವಿದ್ಯಾಲಯದ ಸ್ಥಾಪನೆಗೆ ಕಾರಣರಾದರು. ಒಬ್ಬ ವ್ಯಕ್ತಿ ಇಷ್ಟು ಕಾರ್ಯಗಳನ್ನು ಮಾಡಿದ್ದರೆಂದ ಮೇಲೆ ಅವರು ಕಾರಣಪುರುಷರೇ ಇರಬೇಕು. ಅನಾನುಕೂಲ ಪರಿಸ್ಥಿತಿಯಲ್ಲಿಯೂ ಮನುಷ್ಯ ಏನೇನನ್ನು ಸಾಧಿಸಬಹುದು ಎಂಬುದಕ್ಕೆ ಹಳಕಟ್ಟಿಯವರು ಒಂದು ಉದಾಹರಣೆಯಾಗಿ ನಿಲ್ಲುತ್ತಾರೆ. ಸಾದಾ ಬದುಕು ಉದಾತ್ತ ವಿಚಾರ ಎಂಬ ಸೂತ್ರವೇ ಹಳಕಟ್ಟಿಯವರ ಜೀವನ ವಿಧಾನವಾಯಿತು. ಪರಂಪರೆಯನ್ನು ಅಳಿಸಬೇಕೆನ್ನುವ ಮೌಲ್ಯಗಳನ್ನು ವಿಕೃತಗೊಳಿಸುವ ಮನೋಭಾವ ಇರುವ ಈ ದಿನಗಳಲ್ಲಿ ಇಂತ ಪುಣ್ಯ ಜೀವಿಗಳ ಸ್ಮರಣೆ ನಾಡಿಗೆ ಕಲ್ಯಾಣಕಾರಿಯಾದದು.

ಹಸ್ತಪ್ರತಿಗಳ ಸಂಗ್ರಹದ ವಿಸ್ತಾರದ ಬಗೆ ಅವರ ಕೆಳಗಿನ ಮಾತುಗಳೇ ಸಾಕ್ಷಿ. 1920ರೊಳಗಾಗಿ ನಾನು ಅನೇಕ ತಾಡೋಲೆಗಳನ್ನು ಸಂಗ್ರಹಿಸಿದ್ದೆ. ಅವು ಸುಮಾರು ಒಂದು ಸಾವಿರ ಪುಸ್ತಕಗಳಷ್ಟಾದವು. ಅವುಗಳಲ್ಲಿ ಕೆಲವು ಅಪೂರ್ವ ಗುಣಗಳನ್ನು ಹೊಂದಿದ್ದವು. ಜನರಿಗೆ ಅವುಗಳಲ್ಲಿ ಕನ್ನಡ ಸಾಹಿತ್ಯದ ಪರಿಕಲ್ಪನೆ ಇಲ್ಲದ್ದರಿಂದ ನಾನು ಅವುಗಳ ಒಂದು ಪ್ರದರ್ಶನವನ್ನು ಏರ್ಪಡಿಸಿದ್ದೆ. ಅದನ್ನು ಆಗಿನ ಕಲೆಕ್ಟರು ಉದ್ಘಾಟಿಸಿದರು. ಈ ತಾಡೋಲೆಗಳಲ್ಲಿ ಹೆಚ್ಚಾಗಿ ವೀರಶೈವ ಗ್ರಂಥಗಳಿದ್ದವು. ಅವುಗಳಲ್ಲಿ ಅತಿ ಮುಖ್ಯವಾದವುಗಳು 11 ಹಾಗೂ 12ನೇ ಶತಮಾನದ ಶರಣರು ಹಾಗೂ ಸಂತರಿಂದ ಬರೆಯಲ್ಪಟ್ಟಿದ್ದವು. ವಚನಗಳೆಂದು ಪ್ರಸಿದ್ಧವಾದ ಈ ಬರಹಗಳ ಭಾಷೆ, ಶೈಲಿ ಹಾಗೂ ಅಲ್ಲಿ ನಿರೂಪಿತವಾದ ತತ್ವ ಜ್ಞಾನ ಕನ್ನಡ ಸಾಹಿತ್ಯದಲ್ಲಿ ಅಪೂರ್ವವಾಗಿದೆ. ಈ ವೇಳೆಯಲ್ಲಿ ಈ ವಚನಗಳ ಬಗೆಗೆ ಅವರಿಗೆ ಏನೂ ಗೊತ್ತಿರಲಿಲ್ಲ. ಕಾವ್ಯ ಕೃತಿಗಳನ್ನೊಳಗೊಂಡ ಅತಿ ಅಮೂಲ್ಯ ಸಾಹಿತ್ಯ ಕೃತಿಗಳಾಗಿದ್ದವು. ಅವು ರಗಳೆ, ಷಟ್ಪದಿ, ಸಾಂಗತ್ಯ,, ತ್ರಿಪದಿ, ಹಾಡು ಮೊದಲಾದ ರಚನೆಗಳಾಗಿದ್ದವು. ಸಾಹಿತ್ಯವನ್ನು ಪ್ರಕಟಿಸಲು ಪ್ರಾರಂಭಿಸಬೇಕೆಂದು ನಾನು ನಿರ್ಧರಿಸಿದೆ. ಮೊದಲು ಈ ಹಸ್ತ ಪ್ರತಿಗಳನ್ನು ನಕಲು ಮಾಡಲು ಇಬ್ಬರು ಕಾನಕೂನರನ್ನು ನೇಮಿಸಿದೆ. ಅವರು ಸತತವಾಗಿ ಎರಡು ವರ್ಷಗಳವರಗೆ ಈ ಕಾರ್ಯವನ್ನು ಮಾಡಿದರು., ವಚನಗಳ ಪ್ರಕಟನೆಗಳ ಮೊದಲು ಪ್ರಾರಂಭಿಸಬೇಕೆಂದು ನಾನು ವಿಚಾರ ಮಾಡಿದೆ. ಆ ಕಾಲದಲ್ಲಿ ಕೇವಲ 50 ವಚನಕಾರರ ಹೆಸರು ಗೊತ್ತಿದ್ದವು. ನಾನು ಪ್ರಾರಂಭಿಸಿದ ಕೃತಿಗಳಿಂದ ಅವರು 250 ಇರಬಹುದೆಂದು ಗೊತ್ತಾಯಿತು. ಆ ವಚನಗಳು ಅನೇಕ ಹಸ್ತಪ್ರತಿಗಳಲ್ಲಿ ಹರಡಿದ್ದು ಕಂಡು ಬಂದಿತು. ಆದ್ದರಿಂದ ಪ್ರತಿಯೊಂದನ್ನು ಬೇರೆ ಬೇರೆಯಾಗಿ ನಕಲು ಮಾಡಬೇಕು. ಪ್ರತಿಯೊಬ್ಬ ವಚನಕಾರರ ವಚನಗಳನ್ನು ಒಂದೇ ಪುಸ್ತಕ ಮಾಡಲು ಒಂದೆಡೆಗೆ ಜೋಡಿಸಲಾಯಿತು. ಇದನ್ನು ಮಾಡಲು ಅನೇಕ ದಿನಗಳು ಬೇಕಾಯಿತು ಆಗ ಇದು ಜನರಿಗೆ ಗೊತ್ತಿರದ ಅಪೂರ್ವ ಸಾಹಿತ್ಯವೆಂದು ಗೊತ್ತಾಯಿತು. ನನಗೆ ದೊರೆತ ವಚನ ಗ್ರಂಥಗಳ ಪ್ರತಿಗಳೆಲ್ಲವೂ ಅಶುದ್ಧವೆಂದು ಗೊತ್ತಾಯಿತು. ಒಂದು ಉದಾಹರಣೆಯಿಂದ ಇದು ಸ್ಪಷ್ಟವಾಗಬಹುದು:

ಮರಿಶಂಕರ ದ್ದಾವರ ಸಂಸ್ಕರಣ: ಹೃದಯದೊಳಗೆ ಬಚ್ಚಿಟ್ಟ ಬಯಕೆಯ ಕಿಚ್ಚಿನಂತೆ ಇದ್ದೀತು, ಶಶಿಯೊಳಗಣ ರಸದ ರುಚಿಯಂತೆ ಇದ್ದೀತು. ನನೆಯೊಳಗಣ ಪರಿಮಳದಂತಿದ್ದಿರು, ಕೂಡಲಸಂಗಮ ದೇವ ಕನ್ಯೆಯ ಸ್ನೇಹದಂತಿದ್ದಿತು.

ಡಾ॥ ಫ.ಗೂ. ಹಳಕಟ್ಟಿಯವರ ಒಂದು ಪಾಠ: ಉದಕದೊಳಗೆ ಬಚ್ಚಿಟ್ಟ ಬಯಕೆಯ ಕಿಚ್ಚಿನಂತೆ ಇದ್ದಿತು. ಸಸಿಯೊಳಗಣ ರಸದ ರುಚಿಯಂತೆ ಇದ್ದಿತು. ನನೆಯೊಳಗಣ ಪರಿಮಳ ದಂತೆ ಇದ್ದಿತು ಕೂಡಲ ಸಂಗಮ ದೇವ ಕನ್ಯೆಯ ಸ್ನೇಹದಂತಿದ್ದಿತು.

ವಸ್ತುತಃ ಬಸವಣ್ಣನವರು ಹೇಳಿದ ರೂಪ ಈ ವಚನಗಳಲ್ಲಿ ಎಷ್ಟರ ಮಟ್ಟಿಗೆ ಇದೆ. ಮೊದಲನೆಯ ಪಂಕ್ತಿಯ ಮರಿಶಂಕರದ್ದಾವರ ಸಂಸ್ಕರಣದಲ್ಲಿ ಸಂಪೂರ್ಣ ಭಿನ್ನಗತಿಯದ್ದಾಗಿದೆ; ಅದು ಎಷ್ಟು ಅರ್ಥವತ್ತಾದರೂ ಐಕ್ಯೈಕ ಆಕಾರವಾಗಿದ್ದು ಮಿಶ್ರಪ್ರತಿಯಾಗಿದ್ದು ನಂಬಿಕೆಗೆ ಅನರ್ಹವಾಗಿದೆ.

ಡಾ॥ಫ.ಗು. ಹಳಕಟ್ಟಿಯವರ ಸಂಪಾದನೆಯ ಬಹುಭಾಗ ಸ್ವೀಕಾರ ಯೋಗ್ಯವಾಗಿದ್ದು ಆನಂತರದ ಸಂಸ್ಕರಣಗಳಿಂದ ಸುಸ್ಪಷ್ಟ. ಇದು ಗಮನಾರ್ಹವಾದ ಅಂಶ.

*

# ವಿಶ್ವದ ಮಹಿಳಾ ಅನುಭಾವಿಗಳು

## 'ಮ್ಯಾಗ್ಡ್ ಬರ್ಗ್‌ನ ಮ್ಯಾಟಿಲ್ಡ'

– ಡಾ॥ ಕೆ.ಎಸ್. ರತ್ನಮ್ಮ, ಪ್ರಾಂಶುಪಾಲರು,
೨೮೮೪, ಕೋರ್ಟ್ ಹಿಂಭಾಗ, ಸರಸ್ವತಿಪುರಂ, ಮೈಸೂರು–೫೭೦ ೦೦೯, ದೂ: ೨೫೪೪೫೧೦೯

ಪ್ರಪಂಚದ ಎಲ್ಲ ಧರ್ಮಗಳಲ್ಲಿಯೂ ಅನುಭಾವಿ ಸ್ತ್ರೀ ಪುರುಷರು ಇದ್ದಾರೆ. ಪರಮಾತ್ಮನಲ್ಲಿ ಅರಿಯುವ ಪ್ರಯತ್ನದಲ್ಲಿ ಶ್ರದ್ಧೆ ಭಕ್ತಿಗಳಿಂದ ಕಠಿಣ ತಪೋಮಾರ್ಗವನ್ನು ಅನುಸರಿಸುತ್ತಾರೆ. ಕಡೆಗೊಮ್ಮೆ ದೇವಾನುಗ್ರಹವಾದಂತೆ ತಾನು ಬೇರೆಯಲ್ಲ, ಪರಮಾತ್ಮ ಬೇರೆಯಲ್ಲ ಎಂದು ಅರಿತಾಗ ಅಂತರಂಗದ ಉಜ್ವಲಪ್ರೇಮವನ್ನು ಪ್ರಕಟಿಸುತ್ತ ಪರವಶ ವಾಗುವ ಸ್ಥಿತಿಯೇ ಅನುಭಾವ.

ಇಂಥ ಅನುಭಾವೀ ಸ್ತ್ರೀಯರ ಚರಿತ್ರೆಯೊಂದಿಗೆ ಜರ್ಮನಿಯ ಅನುಭಾವಿಗಳ ಇತಿಹಾಸ ಆರಂಭವಾಗಿದೆ. ಜರ್ಮನಿ ಹಾಗೂ ಇತರ ಯೂರೋಪಿನ ರಾಜ್ಯಗಳಲ್ಲಿ ಕ್ರೈಸ್ತ ಧರ್ಮ ಪ್ರಧಾನವಾಗಿದೆ. ಕ್ರೈಸ್ತ ಧರ್ಮದ ವಿಧಿವಿಧಾನ ಗಳು ಅತ್ಯಂತ ಜಿಗುಟುತನ ಸಂಪ್ರದಾಯಸ್ಥ ಆಚರಣೆಯಾಗಿ ಇದ್ದವು. ಕಾಲಾನಂತರ ಪರಿವರ್ತನೆಯಾಗಿ ಮೂಢ ನಂಬಿಕೆಗಳ ಬದಲು ವೈಜ್ಞಾನಿಕ ವಿಚಾರಧಾರೆ, ತಾರ್ಕಿಕತೆ ಜೊತೆಗೆ ದೈವಪ್ರೇರಿತ ಚಿಂತನೆಗಳು ಹೆಚ್ಚಿದವು. ಇಂಥ ಒಂದು ಪರ್ವಕಾಲದಲ್ಲಿ ಅನೇಕ ಅನುಭಾವೀ ಸ್ತ್ರೀಯರು ಭೂಮಿಯ ಪ್ರಪಂಚದಲ್ಲಿ ಕಾಣಿಸಿಕೊಳ್ಳುತ್ತಾರೆ. ಅಂಥವರಲ್ಲಿ ಮ್ಯಾಗ್ಡ್‌ಬರ್ಗ್‌ನ ಮ್ಯಾಟಿಲ್ಡಳು ಪ್ರಮುಖಳು. ಈಕೆ ಮತ ಸಿದ್ಧಾಂತಗಳು ಕ್ರಿಸ್ತನ ನಿಜವಾದ ಬೋಧೆಗಳನ್ನು ಮರೆಮಾಡಿದಾಗ ವಾಸ್ತವವಾಗಿ ಎಲ್ಲರೂ ತಿಳಿಯುವಂತೆ ದೈವೀ ಪ್ರೇಮ ಸಾರಿದ ಸಾಧಕಿ.

ಮ್ಯಾಗ್ಡ್‌ಬರ್ಗ್‌ನ ದೈವಭಕ್ತಿ ಮ್ಯಾಟಿಲ್ಡ್ ಜೀಸಸ್ ಕ್ರೈಸ್ತನ ಆರಾಧಕಿ. ಈಕೆಯ ಜೀವನದ ಬಗ್ಗೆ ಐತಿಹಾಸಿಕ ಅಂಶಗಳು ಹೆಚ್ಚು ದೊರೆಯುವುದಿಲ್ಲ. ಅತ್ಯಂತ ಶ್ರೀಮಂತ ಕುಟುಂಬದಲ್ಲಿ ಹುಟ್ಟಿದ ಮ್ಯಾಟಿಲ್ಡಗೆ 12ನೇ ವಯಸ್ಸಿನಲ್ಲಿ ಭಗವಂತನ ಮೇಲೆ ಪ್ರೇಮ ಹುಟ್ಟುತ್ತದೆ. ದೈವ ಪ್ರೇಮದಿಂದ, ದೇವರಿಗಾಗಿ ಬದುಕಬೇಕೆಂಬ ಹಂಬಲ ಅವಳದು. ಸು 1235ರ ಹೊತ್ತಿಗೆ ಆಕೆ ತನ್ನೂರಿನ ಬಿಗೈನಸ್ ಮನೆ ಎಂದರೆ ಧಾರ್ಮಿಕ ಸನ್ಯಾಸಿನಿಯರ ಸ್ವತಂತ್ರ ಸಂಸ್ಥೆಗೆ ಸೇರಿದಳು. ಇಲ್ಲಿ ಸಾಮಾನ್ಯ ಜೀವನದಿಂದ ದಾನ, ರೋಗಿಗಳ ಶುಶ್ರೂಷೆ, ಭಕ್ತಿ ಸಮರ್ಪಣ ಆಚರಣೆಗಳು ಪ್ರಮುಖವಾಗಿದ್ದವು. ಕೆಲಕಾಲ ಇಲ್ಲಿದ್ದು ಮ್ಯಾಟಿಲ್ಡ ಬದುಕನ್ನು ಅರಿಯಲು ದೇಶಾದ್ಯಾಂತ ಪ್ರಯಣ ಹೊರಟಳು.

ಪ್ರಯಾಣದಲ್ಲಿ ಮ್ಯಾಟಿಲ್ಡ್ ದೈವ ಸಾಕ್ಷಾತ್ಕಾರಕ್ಕೆ ಹಾತೊರೆದು ಕಠಿಣ ಚಿತ್ರಹಿಂಸೆಗೆ ತನ್ನನ್ನು ಒಡ್ಡಿಕೊಂಡಳು. ದೈವದರ್ಶನಕ್ಕೆ ಶರೀರವೇ ಸಾಧನ ಎಂದು ಬ್ರಹ್ಮಚರ್ಯದಿಂದ ದೇಹ ನಿಯಂತ್ರಣಕ್ಕೆ ತಂದಳು. ಆಚರಣೆಯ ತೀವ್ರಗೊಂಡಂತೆ ಪ್ರತಿ ನಿತ್ಯ ಹೊಸ ಹೊಸ ಸಂದೇಶಗಳು ಆಗುತ್ತಲೇ ಇದ್ದವು. ಬೆಳಕು ಮತ್ತು ಪ್ರೇಮಲೋಕಗಳನ್ನು ಕಂಡ ಅವಳು ಭಗವಂತ ಈ ಜಗತ್ತಿನ ಸೌಂದರ್ಯದಲ್ಲಿ, ವೈವಿಧ್ಯಮಯ ಬಣ್ಣಗಳಲ್ಲಿ ಲೋಕಕ್ಕೆ ತನ್ನನ್ನು ತೋರಿಸಿಕೊಳ್ಳುತ್ತಾನೆಂದು, ಭಗವಂತನೇ ತನಗೆ ತೋರಿದನೆಂದು ಹೇಳುತ್ತಾಳೆ. ಅವಳ ಕಾಲದ ಪ್ರಣಯಗೀತಕಾರರು ಹಾಡುತ್ತಿದ್ದ ಸುಂದರ ಪ್ರೇಮಗೀತೆಗಳನ್ನು ಮೀರಿಸುವ ದೈವಪ್ರೇಮದ ಗೀತೆಗಳು ಮ್ಯಾಟಿಲ್ಡಗೆ ಅತ್ಯಂತ ಸುಲಭ ಸಾಧ್ಯವಾಗುತ್ತದೆ. ಆಕೆ ದೈವೀ ಪ್ರೇಮದೊಂದಿಗೆ ತನ್ನ ಆತ್ಮಾದಾನಂದ ಪರವಶತೆಯನ್ನು ವಿಸ್ತರಿಸಿಕೊಳ್ಳುತ್ತಾಳೆ.

ಮ್ಯಾಟಿಲ್ಡ ಒಬ್ಬ ಆಧ್ಯಾತ್ಮ ಬರಹಗಾರ್ತಿ. ಹದಿನಾಲ್ಕು ವರ್ಷಗಳ ಕಾಲ ತನ್ನ ಅನುಭವಗಳ ದರ್ಶನ ಅಥವಾ ಕಾಣ್ಕೆಯನ್ನು ಬರೆದಿಡುತ್ತಾಳೆ. ಅವಳಿಗೆ ಲ್ಯಾಟಿನ್ ಭಾಷೆ ಬರುತ್ತಿರಲಿಲ್ಲ. ಆದ್ದರಿಂದ ಕೆಳಸ್ತರದ ಜರ್ಮನ ಭಾಷೆಯಲ್ಲಿ ಬರೆದಿದ್ದಾಳೆ. ಇವಳು ಬರೆದ ಆ ಪುಟಗಳಲ್ಲಿ ಹಾಲಿಯ ಫ್ರೆಂಚ್ ಭಿಕ್ಷುವೊಬ್ಬ ಸಂಗ್ರಹಿಸಿದ್ದನು. ನಂತರ ಅಲೆಮ್ಯಾನಿಕ್ ಭಾಷೆಗೆ ಅನುವಾದಿಸಿ, ಸಾರ್ವಜನಿಕರಿಗೆ ದೊರಕುವಂತೆ ಮಾಡಿದನು. ಕೆಲವೇ ದಿನಗಳಲ್ಲಿ ಇದು ಲ್ಯಾಟಿನ್ ಭಾಷೆಗೂ ತರ್ಜುಮೆಗೊಂಡಿತು. ಇದನ್ನು ಓದಿದ ಡಾಂಟೆ ಕೂಡ ಪ್ರಭಾವಿತನಾಗಿದ್ದನೆಂದು ಹೇಳುತ್ತಾರೆ.

ಮ್ಯಾಟಿಲ್ಡ ತಾನು ದೈವಾನುಗ್ರಹದಂತೆ ಪಡೆದ ಪ್ರೇಮದ ಐಕ್ಯಸ್ಥಿತಿಯ ಅನುಭವಗಳನ್ನು ತನ್ನ ಗ್ರಂಥ 'The Flooting Light of the God-head' ಎಂಬ ಹೆಸರಿನಲ್ಲಿ ತನ್ನ ಗ್ರಂಥದಲ್ಲಿ ನಿರೂಪಿಸಿದ್ದಾಳೆ. ತನ್ನ ಅಂತರ್ವಾಣಿಗಳನ್ನು, ದಿವ್ಯದರ್ಶನಗಳನ್ನು ಪ್ರೇಮದ ಅದಮ್ಯತೆಯ ಅದ್ಭುತ ಅನುಭವಗಳನ್ನು ವರ್ಣಿಸಿದ್ದಳು. ತನ್ನ ಅನುಭವಗಳಿಗೆ ಆಧಾರ ನೀಡಲು ಅನ್ಯಮಾರ್ಗವಿಲ್ಲದೆ ಮಾನವ ಪ್ರೇಮವನ್ನು ವರ್ಣಿಸಿ ಜೀವಾತ್ಮ ಸತಿಯಾದರೆ ಪರಮಾತ್ಮ ಪತಿ ಎಂಬುದನ್ನು ಈ ಸ್ವರ್ಗೀಯ ವಿವಾಹದಲ್ಲಿ ಪ್ರೇಮದ ಅನನ್ಯತೆಯನ್ನು ತೋರಿದಳು. ತನ್ನ ಸಮಕಾಲೀನರನ್ನು ತೀಕ್ಷ್ಣವಾಗಿ ಟೀಕಿಸಿದ ಅವಳ ವಿಮರ್ಶಾ ನುಡಿಗಳು ಮತ್ತು ತಿದ್ದುಪಡಿ ಚರ್ಚೆಗಳು ಸನ್ಯಾಸಿಗಳ ಮಠವನ್ನು ಪ್ರವೇಶಿಸಿತು. ಹೀಗೆ ಸುಧಾರಣೆಗಳನ್ನು ಬೋಧಿಸಿದ್ದಲ್ಲದೆ ತಾನು ಅನುಸರಿಸಿ ಜಾರಿಗೆ ತಂದಳು. ನುಡಿದಂತೆ ನಡೆದು ತನ್ನ ಕಾಲದ ಜನರಿಗೆ ಮಾದರಿ ಯಾದಳು.





ತನ್ನ ಜೀವನದ ಕೊನೆಯ ದಿನಗಳನ್ನು ದ ಹೆಲ್ಫ್‌ದ ಕಾನ್ವೆಂಟಿನಲ್ಲಿ ಕಳೆದಳು. ಅಲ್ಲಿ ಗರ್ಟ್ರೂಡ್ ಮತ್ತು ಹ್ಯಾಕ್ ಬೋರ್ನ್‌ನ ಮ್ಯಾಟಿಲ್ಡ ಸೋದರಿಯನ್ನು ಪಡೆದಳು. 1299ರಲ್ಲಿ ಇಲ್ಲಿ ಅಧ್ಯಯನ ಮಾಡಿದ್ದಳು. ಅಂತಿಮ ದಿನಗಳಲ್ಲಿ ತನ್ನ ಶುಶ್ರೂಷೆ ಮಾಡುತ್ತಿದ್ದ ಸೋದರಿಯರಿಗೆ, ದೇವರಿಗೆ ತೋರಿದ ಪ್ರೇಮದ ಬದುಕಿನ ನಂತರದ ಸಾವಿನೆಡೆಗೆ ಸಾಗುವ ಪ್ರಕ್ರಿಯೆ ಪರಮಾತ್ಮನಲ್ಲಿ ಪಡೆದ ಶಾಶ್ವತ ಐಕ್ಯಾನುಭವ ತುರೀಯಾವಸ್ಥೆ ಗಿಂತ ಕಡಿಮೇಯೇನಲ್ಲ ಎಂಬುದನ್ನು ಸಾಧಿಸಿ ತೋರಿಸಿದಳು.

ಮ್ಯಾಟಿಲ್ಡಳು ಪಡೆದ ಐಕ್ಯಾನುಭವ ಪರಿಪೂರ್ಣ ಶಾಂತಿಯ ಸಚ್ಚಿದಾನಂದ ಸ್ಥಿತಿಯೇ ಆಗಿದೆ. ಆ ಸ್ಥಿತಿಯಲ್ಲಿ ಆಕೆ ಜಗತ್ತಿನ ಎಲ್ಲದರಲ್ಲೂ ದೇವನನ್ನು ಅವನ ಲೀಲೆಯನ್ನು ಕಂಡಳು. ಹೀಗೆ ಪ್ರೇಮದ ಹಾದಿಯಲ್ಲಿ ಉತ್ಸಾಹದಿಂದ ಮುನ್ನಡೆದ ಆಕೆ ಎಲ್ಲವನ್ನೂ ಕ್ಷಮಿಸುವ, ನಿಸ್ವಾರ್ಥ ಪ್ರೇಮದ ಸ್ಥಿತಿಯ ಅತ್ಯುನ್ನತ ಗುರಿ ತಲುಪಿದಳು. ಹೀಗೆ ಮ್ಯಾಟಿಲ್ಡಾಳಲ್ಲಿ ಸಾಕ್ಷಾತ್ಕಾರಗೊಂಡ ಪ್ರೇಮ ಒಂದು ಪ್ರಬಲವಾದ ಶಕ್ತಿ. ಮಾನವರು ದೇವವಾಣಿಯನ್ನು ಕೇಳುವ ಮತ್ತು ಅರ್ಥ ಮಾಡಿಕೊಳ್ಳುವ ಅನುಭಾವಿಕ ಪ್ರಪಂಚದ ಅದ್ಭುತಗಳನ್ನು ಮ್ಯಾಟಿಲ್ಡಾ ಅನುಭವಿಸಿದಳು. ತಾನು ದೈವಸ್ವರೂಪಿ ಎಂಬುದನ್ನು ಅರಿತು ಆತ್ಮ ಸ್ಥೈರ್ಯದಲ್ಲಿ ಪ್ರೇಮದ ಧನ್ಯತೆ ಪಡೆದಾಗ ಅವಳ ಅನುಭವಗಳನ್ನು ಹೀಗೆ ಬರೆದಿದ್ದಾಳೆ, 'ಮೀನು ನೀರಿನಲ್ಲಿ ಮುಳುಗುವುದಿಲ್ಲ। ಹಕ್ಕಿ ಗಾಳಿಯಲ್ಲಿ ಪತನವಾಗುವುದಿಲ್ಲ। ಪರಮಾತ್ಮ ಬೆಂಕಿಯಲ್ಲಿ ಅದೃಶ್ಯವಾಗು ವುದಿಲ್ಲ। ಮತ್ತಷ್ಟು ಹೆಚ್ಚು ಹೊಳೆಯುತ್ತಾರೆ, ಕಾಣಿಸಿ ಕೊಳ್ಳುವವನು। ಪರಮಾತ್ಮ ಪ್ರತಿಯೊಂದು ಪ್ರಾಣಿಯನ್ನು ಸೃಷ್ಟಿಸಿದ। ಭಗವಂತನಲ್ಲಿ ಐಕ್ಯವಾಗಲು ಬಯಸುವ । ನನ್ನ ಆ ನೈಜ ಸ್ವಭಾವವನ್ನು ಪಡೆದುಕೊಳ್ಳುವುದಾದರೂ ಹೇಗೆ? ಆದಿಯಿಂದಲೂ ಆತ ನನಗೆ ತಂದೆ। ಇಡೀ ಮನುಕುಲದಲ್ಲಿ ಸೋದರ ನನಗೆ। ಪ್ರೇಮದಲ್ಲಿ ನನ್ನ ವರ। ಶಾಶ್ವತ ಸ್ಥಿತಿಯಲ್ಲಿ ಅವನವಳು ನಾನು' – ಹೀಗೆ ತನ್ನ ಐಕ್ಯದ ಸ್ಪಷ್ಟ ಮಾತು ಗಳಲ್ಲಿ ದಿವ್ಯ ದರ್ಶನವನು ದಾಖಲಿಸಿರುತ್ತಾಳೆ.

ಮ್ಯಾಟಿಲ್ಡಳ ಚಿಂತನೆಗಳು ಆಧ್ಯಾತ್ಮಿಕ ಅನುಭವಗಳನ್ನು ತಿಳಿಸಿರುವ ಭಾವಗೀತೆಗಳು ಸುಂದರವಾಗಿ ಪ್ರೇಮದ ಅಭಿವ್ಯಕ್ತಿಗೆ ತೆರೆದುಕೊಂಡಿವೆ.

ಪ್ರಪಂಚವನ್ನು ಜಯಿಸುವಲ್ಲಿ ? ಆಸೆಗಳನ್ನೆಲ್ಲ ತ್ಯಾಗ ಮಾಡುವುದರಲ್ಲಿ ಅಹಂಕಾರವನ್ನು ನಿಷ್ಫಲಗೊಳಿಸುವಲ್ಲಿ ಆತ್ಮ ಪರಮಾತ್ಮನಿಗೆ ಬರುತ್ತದೆ। ಜಗತ್ತು ಪೆಟ್ಟು ಕೊಟ್ಟರೆ । ಅದು ದುಃಖಕ್ಕೆ ಕಾರಣವಾಗುವುದಿಲ್ಲ. ಭೌತಿಕ ಪೆಟ್ಟು ಬಿದ್ದರೆ ಅದಕ್ಕೆ ಆಧ್ಯಾತ್ಮಿಯ ತೇಜಸ್ಸು ಕೆಡುವುದಿಲ್ಲ, ಆ ದೆವ್ವ ಸೈತಾನ ಧೈರ್ಯ ಮಾಡಿದರೂ । ಆತ್ಮ ಗಮನಿಸುವುದಿಲ್ಲ। ಆಕೆ ಪ್ರೇಮಿಸುತ್ತಿರುತ್ತಾಳೆ। ಪ್ರೇಮಿಸುತ್ತಿದ್ದಾಳೆ. ಆಕೆಗೆ ಬೇರೇನೂ ತಿಳಿದಿಲ್ಲ

ಮತ್ತೆ ಇನ್ನೊಂದೆಡೆ ಪ್ರೇಮದ ಭಾವಾತಿರೇಕದ ವರ್ಣನೆ ಅನುಭಾವಿಕ ಕವಿತೆಯಾಗಿದೆ ಅವಳ ಅನುಭಾವ ಸಾರಗಳ ಅರ್ಥಪೂರ್ಣ ಅಭಿವ್ಯಕ್ತಿಯಾಗಿವೆ.

'ನಿನ್ನನ್ನು ಪ್ರೇಮ ಹೊಂದಿದ್ದರೆ ಮಾತ್ರ ನೀನು ಮುಕ್ತ ಭಾವವನ್ನನುಬ್ಬವಿಸುವಂತೆ ನಿನ್ನ ಉಪದೇಶವನ್ನಲ್ಲ ವ್ಯರ್ಥ, ಕಾರಣ ಪ್ರೇಮ ರಹಿತಳಾಗಿರಲಾರೆ। ಪ್ರೇಮದಿಂದ ಸೆರೆಯಾಗ ಬಯಸುತ್ತೇನೆ। ಪ್ರೇಮವಿಲ್ಲದೆ ಬದುಕಿರಲಾರೆ ನಾನು ಅದು ಇರುವುದೆಡೆಗೆ ಹೋಗಬೇಕು ನಾನು ಬದುಕಿನಲಾಗಲೀ ಸಾವಿನಲ್ಲಾಗಲೀ ನನಗೆ ಗೊತ್ತಿಲ್ಲ. ದುಃಖಿ ಹೃದಯ ಬೇನೆಯಿಲ್ಲದೆ ಬದುಕುವವರು. ದಡ್ಡರಲ್ಲಿ ದಡ್ಡತನವುಳ್ಳವರು ಎಂದು ಸರಾಗವಾಗಿ ಹರಿಯುವ ಅವಳ ಪದ್ಯಗಳಲ್ಲಿ ಜೀವನದ ಸಾರವಿದೆ. ದಾರ್ಶನಿಕ ನಿರೂಪಣೆ ಕಡಿಮೆ. ಪ್ರಮಾಣದಲ್ಲಿದೆ. ಆದರೆ ಅವಳ ಜೀವನದ ಗುರಿ. ಜೀವನದ ಶ್ರೇಯ ಎಲ್ಲವೂ. 'ಅರ್ಥವಿಲ್ಲದ ಪ್ರೇಮ। ಪ್ರೇಮದ ಪಾಲಿಗೆ ನೈಜ ಕತ್ತಲೆ' ಎಂಬ ಕವಿವಾಣಿಯ ದರ್ಶನವೇ ಆಗಿದೆ. ಪರಿಶುದ್ಧ ಮತ್ತು ನಿಸ್ವಾರ್ಥ ಪ್ರೇಮದ ಮೂಲಕ ದೇಹದಿಂ ದೊಗ್ಗಿದ್ದನೋ ಆತ್ಮವನ್ನು ಪರಮಾತ್ಮನೊಂದಿಗೆ ಐಕ್ಯ ಮಾಡಿಕೊಳ್ಳಲು ಸಮರ್ಥಳಾಗಿದ್ದಳು. ಅವಳ ಕೇಂದ್ರದ ಪರಿಧಿಯಲ್ಲಿ ಆತ್ಮ ವರ್ತಿಸುತ್ತದೆ. ಮ್ಯಾಟಿಲ್ಡಳ ಭಾವನೆಗಳು ಐಕ್ಯ ಸ್ಥಿತಿಯ. ಆತ್ಮ ಪರಮಾತ್ಮನಲ್ಲಿ ಐಕ್ಯಗೊಂಡ ಮಿಲನ ವೈನ್ ಮತ್ತು ನೀರು ಸೇರಿದಂತೆ ಎಂದೂ ತನ್ನ ಪ್ರಿಯಳಿಗಾಗಿ ಹಂಬಲಿಸುತ್ತಿರುವ ಪರಮಾತ್ಮ ತನ್ನ ಪ್ರೇಮಿಯನ್ನು ಸೇರಲು ಹಾತೊರೆಯುತ್ತಿರುತ್ತಾಳೆ ಎಂಬಂತೆ ಮಾತನಾಡುತ್ತಾಳೆ. ಅವಳೊಂದಿಗೆ ನರ್ತಿಸುತ್ತದೆ ದೇವರು. ಆತ್ಮಗಳಿಗೆ ಹೇಳುತ್ತಾನೆ. ಆದರೆ ಮ್ಯಾಟಿಲ್ಡ್ ಅದನ್ನು ತಿರಸ್ಕರಿಸಿ ನಾನು ನನ್ನ ಪ್ರಭುವಿನೊಂದಿಗೆ ಮಾತ್ರ ನರ್ತಿಸುತ್ತೇನೆ ಎಂದೂ 'ನಾನು ನರ್ತಿಸಬೇಕೆಂದು ನೀನು ಬಯಸುವಿಯಾದರೆ ಸ್ವತಃ ನೀನು ಹಾಡಲೇ ಬೇಕು ಆಗ ನಾನು ಹಾಡುತ್ತೇನೆ ಪ್ರೇಮಲೋಕಕ್ಕೆ ಪ್ರೇಮದಿಂದ ಆರಾಧನೆಗೆ ಆರಾಧನೆಯಿಂದ ಸಾಕ್ಷಾತ್ಕಾರಕ್ಕೆ ಸಾಕ್ಷಾತ್ಕಾರದಿಂದ ಎಲ್ಲ ಮಾನವ ಹೃದಯಗಳಿಗೆ!' ಎಂದು ಮ್ಯಾಟಿಲ್ಡಳು ಪರಮಾತ್ಮನೊಂದಿಗಿನ ಗಾಢವಾದ ಆತ್ಮ ಸಂಬಂಧವನ್ನು ತಿಳಿಸಿದ್ದಾಳೆ.

ಮ್ಯಾಟಿಲ್ಡ ಪ್ರೇಮಗೋಗಿನಿ. ಅವಳ ದೈವೀ ಪ್ರೇಮ ಅನುಭಾವಿಕ ನಿಲವು ಅಕ್ಕಮಹಾದೇವಿಯ ಸತಿಪತಿಭಾವವನ್ನೇ ಹೋಲುತ್ತಾ ಜಗತ್ತಿನ ಎಲ್ಲೆಡೆ ಸಂತ ಹೃದಯಗಳು ಒಂದೇ ಎಂಬುದನ್ನು ದೃಢಪಡಿಸುತ್ತದೆ. ಅಂದಿಗೆ ಚರ್ಚ್‌ನ ಮಧ್ಯಸ್ಥಿಕೆ ಯಿಲ್ಲದೆ ಆತ್ಮ ಸಮಾನರು ಪ್ರೇಮಿಗಳಂತೆ ಪ್ರೀತಿಸಲು ಸಾಧ್ಯವೆಂಬ ಕ್ರಿಸ್ತನ ಸಂದೇಶವನ್ನು ಸಾರಿದ ಕ್ರಾಂತಿಕಾರಿ ಮಹಿಳಾ ಅನುಭಾವಿಯು ಸಾಧಿಸಿದ ಹಿರಿಮೆ-ಗರಿಮೆ ಅಪೂರ್ವ. *

# ಅಂಬಿಗರ ಚೌಡಯ್ಯ

- ಕೆ.ಐ. ಪಾಟೀಲ,
ಬೆಟಗೇರಿ, ಕೇರಾಫ್ ಪಾರೂ ಪ್ರಕಾಶನ, ಸ್ಟೇಷನ್ ರಸ್ತೆ, ಗದಗ -೫೮೨೧೦೧.

ಕಲ್ಯಾಣದ ಶರಣರಲ್ಲಿ ಅಂಬಿಗರ ಚೌಡಯ್ಯನು ಚಾಟಿಏಟಿನ ಚೌಡಯ್ಯ ಎಂದೇ ಪರಿಗಣಿತನಾಗಿದ್ದನು. ಅಷ್ಟೊಂದು ನಿಷ್ಠುರ ನುಡಿ, ನೇರ ಮಾತು. ಶರಣ ಧರ್ಮಕ್ಕೆ ಚ್ಯುತಿ ಕಂಡು ಬಂದಲ್ಲಿ ಯಾರನ್ನೂ ಬಿಟ್ಟವನಲ್ಲ. ಅವನ ಕೆಲ ವಚನಗಳಲ್ಲಿ ಬರುವ ಶಬ್ದಗಳನ್ನು ಅವಲೋಕಿಸಿದಲ್ಲಿ ಇದು ಅನುಭವಕ್ಕೆ ಬರುವುದು.

ಇಷ್ಟೊಂದು ನೇರ ನುಡಿಯ ನಿಷ್ಠುರ ನಡತೆಯ ಚೌಡಯ್ಯನ ವೃತ್ತಿಯಲ್ಲಿ ಅಂಬಿಗ. ಆದರೆ ಆತನ ಹುಟ್ಟೂರು ಯಾವುದು? ತಂದೆ-ತಾಯಿ ಮತ್ತು ಇತರ ಬಂಧು ಬಳಗ ಹಾಗೂ ಆತನು ಜನಿಸಿದ ವರ್ಷ ಇತ್ಯಾದಿ ವಿವರಗಳು ಲಭ್ಯವಿಲ್ಲ. ವಯಸ್ಸಿನಲ್ಲಿ ಬಸವಣ್ಣನಿಗಿಂತ ಸ್ವಲ್ಪ ಹಿರಿಯ ಎಂಬುದು ಮಾತ್ರ ವೇದ್ಯವಾಗುತ್ತದೆ. ಆ ಮೇಲೆ ಆತನ ಅಂಬಿಗ ವೃತ್ತಿಗೂ ಹೊಂದಿಕೆಯಾಗುವಂತೆ ಕಲ್ಯಾಣದ ಪರಿಸರವಿರಲಿಲ್ಲ. ಏಕೆಂದರೆ ಕಲ್ಯಾಣ ಪಟ್ಟಣದ ಸಮೀಪದಲ್ಲಿ ಯಾವ ನದಿ, ಹೊಳೆ ಮುಂತಾದವು ಇಲ್ಲ. ಕೆಲ ಗ್ರಂಥಕರ್ತರ ಪ್ರಕಾರ ಆತನು ತುಂಗಭದ್ರಾ ನದಿ ದಡದಲ್ಲಿರುವ ಚೌಡಯ್ಯ ದಾನಪುರ(ಚಂದಾಪುರ) ಗ್ರಾಮದವನೆಂದು ಪರಿಗಣಿತನಾಗಿದ್ದಾನೆ. ಇದು ಆತನ ಹೆಸರಿಗೂ ಸಂಲಗ್ನಗೊಂಡಿರಬೇಕು. ಇನ್ನೂ ಕೆಲವರು ಆತನು ಸೊಲ್ಲಾಪುರದ ಆಸುಪಾಸಿನಲ್ಲಿ ಭೀಮಾನದಿಯಲ್ಲಿ ನಾವೆ ನಡೆಸುವ ಕಾಯಕ ಮಾಡುತ್ತಿದ್ದ ಎಂದು ಅಭಿಪ್ರಾಯ ಪಡುತ್ತಾರೆ. ಹೀಗಾಗಿ ಆತನ ಊರು, ತಂದೆ-ತಾಯಿಗಳ ಹೆಸರು ಮುಂತಾದುವು ಪ್ರಶ್ನಾರ್ಥಕ ಚಿನ್ಹೆಯಾಗಿಯೇ ಇಂದಿಗೂ ಉಳಿದಿವೆ. ಮೇಲಾಗಿ ಕಲ್ಯಾಣಕ್ಕೆ ಬಂದ ಮೇಲೆ ಶರಣ ಜೀವನ ನಡೆಸುತ್ತ ಅನುಭವ ಮಂಟಪದ ಸದಸ್ಯನಾಗಿ ಜೀವನ ನಿರ್ವಹಣೆಗೆ ಯಾವ ವೃತ್ತಿ ಅವಲಂಬಿಸಿದ ಎಂಬ ಬಗ್ಗೆಯೂ ಉಲ್ಲೇಖಗಳಿಲ್ಲ. ಏಕೆಂದರೆ ಶರಣರು ಯಾವುದಾದರೂ ಕಾಯಕ ಮಾಡಲೇ ಬೇಕು ಮತ್ತು ಆ ಕಾಯಕದ ಮುಖಾಂತರ ಅರ್ಜಿಸಿದ ಧನದಲ್ಲಿ ಮಿಕ್ಕಿದ್ದನ್ನು ದಾಸೋಹಕ್ಕೆ ವಿನಿಯೋಗಿಸಬೇಕು ಎಂಬುದು ಅಲಿಖಿತ ನಿಯಮವೇ ಆಗಿತ್ತು. ಹೀಗಿರುವಾಗ, ನಿಷ್ಠುರ ಹಾಗೂ ನೇರನುಡಿಯ ಚೌಡಯ್ಯ ಯಾವುದಾದರೂ ಕಾಯಕವನ್ನು ಅವಲಂಬಿಸಿರಲಿಕ್ಕೇ ಬೇಕು. ಆದರೆ ಯಾವ ಕಾಯಕ ಎಂಬುದಕ್ಕೆ ಪುರಾವೆಗಳಿಲ್ಲ.

ಪ್ರಾಣಾಪಾಯವನ್ನು ಲೆಕ್ಕಿಸದೇ ಜನರನ್ನು ನದಿಯಲ್ಲಿ ನಾವೆ ಮತ್ತು ಹರಿಗೋಲುಗಳಲ್ಲಿ ಕೂಡ್ರಿಸಿಕೊಂಡು ನದಿ ದಾಟಿಸುವ ಕಾಯಕ ಮಾಡುತ್ತಿದ್ದ ಅಂಬಿಗರ ಕುಲ ವರ್ಣಾಶ್ರಮ ಪದ್ಧತಿಯಲ್ಲಿ ಕೀಳು ಕುಲ. ಈ ಕುಲದ ಅವಾಂತರದಲ್ಲಿ ವೀರ, ದಾನಶೂರ ಮಹಾಪರಾಕ್ರಮಿ ಕರ್ಣ ಕೂಡ ಮಾನಸಿಕ ಹಿಂಸೆ ಅನುಭವಿಸಿದನು. *'ಆರೊಡನೆ ಕಾದುವೆನು ಕೆಲವರು ಹಾರುವರು ಕೆಲರಂತಕನ ನೆರೆಯೂರವರು ಕೆಲರಧಮ ಕುಲದಲಿ ಜನಿಸಿ ಬಂದವರು'* ಎಂದು ವಿರಾಟ ರಾಜ್ಯದ ಯುವರಾಜ ಉತ್ತರನು ಪೌರುಷ ಹೇಳಿಕೊಳ್ಳುವಾಗಿನ ಪ್ರಸಂಗದ ಪದ್ಯದಲ್ಲಿ ಈ ಭಾವಾರ್ಥ ಬರುತ್ತದೆ. ಆತನ ಪ್ರಕಾರ ಕೌರವನ ಪಾಳೆಯದಲ್ಲಿ ಹಾರುವರು ಎಂದರೆ ದ್ರೋಣ, ಅಶ್ವತ್ಥಾಮರು, ಅಂತಕನ ನೆರೆಯೂರವರು ಎಂದರೆ ವಯೋವೃದ್ಧರಾಗಿ ಸಾಯುವ ವಯಸ್ಸಿಗೆ (ಅಂತಕನ ನೆರೆಯೂರು) ಹತ್ತಿರವಾದ ಭೀಷ್ಮ ಮುಂತಾದವರು ಇನ್ನು ಅಧಮ ಕುಲದಲ್ಲಿ ಜನಿಸಿದವರೆಂದರೆ ಸುತ ಕುಲಜನಾದ ಕರ್ಣನನ್ನೇ ಉದ್ದೇಶಿಸಿ ಹೇಳಿದುದಾಗಿದೆ. ಹೀಗೆ ಕುಲವನ್ನಾಧರಿಸಿ ಮೇಲು ಕೀಳಿನ ಆಚರಣೆ ಆಗಿನಿಂದಲೂ ಪ್ರಚಲಿತವಿದೆ. ಅದಕ್ಕಾಗಿ ತನ್ನನ್ನು ಅಂಬಿಗ ಎಂದು ಜರಿದವರಿಗೆ-

*ಅಂಬಿಗ ಅಂಬಿಗ ಎಂದು ಕುಂದು ನುಡಿಯದಿರು*
*ನಂಬಿದರೆ ಒಂದೇ ಹುಟ್ಟಿನಲ್ಲಿ ಕಡೆ ಹಾಯಿಸುವ ಅಂಬಿಗರ ಚೌಡಯ್ಯ*

ಎಂದು ಮಾರ್ನುಡಿಯುತ್ತಾನೆ. ನಂಬಿ ಬಂದವರಿಗೆ ಒಂದೇ ಹುಟ್ಟಿನಲ್ಲಿ ಕಡೆ ಹಾಯಿಸುವದು ಎಂದರೆ ಒಂದೇ ಜನ್ಮದಲ್ಲಿ ಮುಕ್ತಿ ದೊರಕಿಸಿಕೊಡುವಂಥ ಅಂಬಿಗ ತಾನೆಂದು ಹೇಳುತ್ತಾನೆ. ಇದಲ್ಲದೇ-

*ತಡೆನೆಲೆಯಿಲ್ಲದೆ ಮಹಾನದಿಯಲ್ಲಿ ಒಡಲಿಲ್ಲದ ಅಂಬಿಗ*
*ಬಂದಿದ್ದೇನೆ, ಹಿಡಿವ ಬಿಡುವ ಮನವ ಬೆಲೆಗೊಟ್ಟೊಡೆ*
*ಕಡೆಗೆ ಹಾಯಿಸುವೆ ಈ ಮಹಾನದಿಯ ನುಡಿಯಿಲ್ಲದ*
*ನಿಸ್ಸೀಮ ಗ್ರಾಮದಲ್ಲಿರಿಸುವೆನೆಂದಾತ ಅಂಬಿಗರ ಚೌಡಯ್ಯ*

ಎಂಬ ವಚನದಲ್ಲಿ ಚೌಡಯ್ಯ ಭೂಮಿಯಲ್ಲಿಯ ಸಂಸಾರವನ್ನು ದಂಡೆ ಮತ್ತು ತಳವಿಲ್ಲದ ಮಹಾನದಿಗೆ ಹೋಲಿಸಿದ್ದಾನೆ. ಹುಟ್ಟು ಸಾವಿನ ಹೊಳೆಯನ್ನು ದಾಟುವ ಇಚ್ಛೆಯುಳ್ಳವರು ಚಂಚಲವಾದ ಮನವನ್ನು ಹೊಳೆ ದಾಟಿಸುವ ರುಸುಮಾಗಿ ನೀಡಿದರೆ ಹೊಳೆ ದಾಟಿಸಿ ನುಡಿಯಿಲ್ಲದ ನಿಸ್ಸೀಮ ಗ್ರಾಮ (ಕೈಲಾಸ) ತಲುಪಿಸುವೆನೆಂದು ಎದೆ ತಟ್ಟಿ ಹೇಳುತ್ತಾನೆ.

ಇಂಥ ಆತ್ಮವಿಶ್ವಾಸದ ಖಣಿ ಚೌಡಯ್ಯ, ಕೇವಲ ಟೀಕಿಸುವುದಷ್ಟೇ ತನ್ನ ಕೆಲಸವೆಂದು ಭಾವಿಸಿದವನಲ್ಲ. ಕೆಳಗಿನ ವಚನದಲ್ಲಿ ಆತನು ಪ್ರಗತಿಪಥದ ಜ್ಞಾನದಲ್ಲಿದ್ದು ಈ ಭವದ ತಾಪತ್ರಯ ನೀಗುವ ಮಾರ್ಗವನ್ನು ತೋರಿದ್ದಾನೆ.





*ಗತಿ ಪಥದ ಜ್ಞಾನದಲ್ಲಿದ್ದು ನೀಗಿರೋ ನಿಮ್ಮ*
*ಭವಬಂಧನದ ಸಾಗರವನ್ನು, ಪ್ರಾಣತ್ಯಾಗವು ಈಗಲೋ,*
*ಆಗಲೋ ಎಂದರಿಯಲಾಗದು. ರೋಗ ರುಜಿನಗಳಿಗೆ*
*ಆಗರವು ನಿಮ್ಮ ಒಡಲು ತನು ಮನ ಪ್ರಾಣ ನೆಚ್ಚದಿರು.*
*ನಾಗಭೂಷಣನ ಪಾದಪೂಜೆಯ ಮಾಡಿ ಶಿವಯೋಗ*
*ದಲ್ಲಿ ಲಿಂಗವನೊಡಗೂಡಿ ಸಾಗಿಹೋದವರು ಭವಗೇಡಿ*
*ಎಂದಾತ ಅಂಬಿಗರ ಚೌಡಯ್ಯ*

ಇಂಥ ಚೌಡಯ್ಯನು ಎಲ್ಲದರಲ್ಲೂ ಸ್ವಂತಿಕೆ. ಉಳಿದ ವಚನಕಾರರಾದ ಶಿವಶರಣರು ತಮ್ಮ ಆರಾಧ್ಯದೈವದ ಹೆಸರನ್ನು ತಮ್ಮ ವಚನಗಳಿಗೆ ಅಂಕಿತ ಮಾಡಿಕೊಂಡರೆ ಚೌಡಯ್ಯ ತನ್ನ ವಚನಗಳಿಗೆ ತನ್ನದೇ ಹೆಸರನ್ನು ಅಂಕಿತ ಮಾಡಿಕೊಂಡಿದ್ದಾನೆ. ಯಾವುದಾದರೂ ದೇವರ ಹೆಸರನ್ನು ಅಂಕಿತ ಮಾಡಿಕೊಂಡರೆ ದಾಸ್ಯದ ಸೂಚಕವೆಂದು ಭಾವಿಸಿದನೋ ಏನೋ. ಹಾಗೆನ್ನಲೂ ಬಾರದು. ಏಕೆಂದರೆ ಉಳಿದ ವಚನಕಾರರನ್ನು ಆತ ತರಾಟೆಗೆ ತೆಗೆದುಕೊಳ್ಳದೇ ಬಿಡುತ್ತಿರಲಿಲ್ಲ. ಇದಕ್ಕೆ ನಿದರ್ಶನವೆಂದರೆ ಮೇಲಿನ ವಚನವನ್ನೇ ನೋಡಬಹುದು. ಅದರಲ್ಲಿ ನಾಗಭೂಷಣನ ಪಾದಪೂಜೆಯ ಮಾಡಿ ಶಿವಯೋಗದಲ್ಲಿ ಲಿಂಗವನೊಡ ಗೂಡಿ ಸಾಗಿ ಹೋದವರು ಎಂಬ ಸಾಲಿನಲ್ಲಿ ಆತನು ದೇವರ ಪ್ರಭುತ್ವವನ್ನು ಒಪ್ಪಿದ್ದಾನೆ. ಒಟ್ಟಿನಲ್ಲಿ ಆತನ ವಚನಗಳ ಅಂಕಿತದ ವಿಷಯದ ನಿಷ್ಕರ್ಷೆ ಊಹಾಪೋಹಗಳಿಗೆ ಬಿಟ್ಟ ವಿಷಯವಾಗಿದೆ.

ದೇವನ ಸಾಕ್ಷಾತ್ಕಾರಕ್ಕಾಗಿ ವ್ರತ ನೇಮಾದಿಗಳನ್ನು ಮಾಡುವವರು, ನೀರಲ್ಲಿ ಮುಳುಗು ಹಾಕುವವರು, ಅಡವಿ ಅರಣ್ಯಗಳಲ್ಲಿ ಕುಟೀರಗಳನ್ನು ನಿರ್ಮಿಸಿಕೊಂಡು ಇರುವವರನ್ನು ಚೌಡಯ್ಯ ಉಗ್ರ ಶಬ್ಧಗಳಲ್ಲಿ ಖಂಡಿಸಿದ್ದಾನೆ. ಆತನ ನಿಲುವೆಂದರೆ ದೇವರು ಅಲ್ಲೆಲ್ಲಿಯೂ ಇಲ್ಲ. ಮಾನವನ ಆತ್ಮದಲ್ಲಿಯೇ ಇದ್ದಾನೆ. ಡಂಭಾಚಾರ ತೊರೆದು, ದಯಾ ದಾಕ್ಷಿಣ್ಯ ಹೊಂದಿದವರಾಗಿ ಸದಾಚಾರ ಸಂಪನ್ನರಾದರೆ ದೇವನು ನಿಮ್ಮಲ್ಲಿಯೇ ನೆಲೆಸುತ್ತಾರೆ ಎಂಬುದಾಗಿದೆ. ಇವೆಲ್ಲಕ್ಕೂ ಆತನು ನೇರ ಉಪಮೆಗಳಿಂದಲೇ ಖಂಡಿಸಿದ್ದಾನೆ. ಇದಕ್ಕೆ ಕೆಳಗಿನ ಆತನ ವಚನವನ್ನು ಗಮನಿಸುವದೊಳಿತು.

ಅಡವಿಯೊಳರಸುವೊಡೆ ಗಿಡಗಂಟೆ ತಾನಲ್ಲ
ಮಡುವಿನೊಳಗಿರಿಸುವೊಡೆ ಮತ್ಸ್ಯ ಮಂಡೂಕನಲ್ಲ
ಒಡಲ ದಂಡಿಸುವೊಡೆ ಕೊಡುವ ಸಾಲಿಗನಲ್ಲ
ಅಷ್ಟ ತನುವಿನೊಳಗೆ ಹುಗಿದಿರ್ಪ ಲಿಂಗವ
ನಿಲುಕಿ ನೋಡಯೇ ಕಂಡ ಅಂಬಿಗರ ಚೌಡಯ್ಯ

ದೇವರ ಸಾಕ್ಷಾತ್ಕಾರಕ್ಕಾಗಿ ಅಡವಿಯನು ಸೇರಲು ದೇವನೇನು ಗಿಡಗಂಟೆಯೇ? ತೀರ್ಥಕ್ಷೇತ್ರಗಳಲ್ಲಿಯ ಮಡುವು ಹೊಂಡ ಮುಂತಾದುವುಗಲಲ್ಲಿ ಮುಳುಗಿ ಹುಡುಕಲು ಅವನು ಮೀನು ಕಪ್ಪೆಯೇ? ಅದೇ ರೀತಿ ದೇಹವನ್ನು ದಂಡಿಸುತ್ತ ಉಪವಾಸ ವ್ರತ ಮಾಡುತ್ತ ಗಡ್ಡ-ಮೀಸೆ, ಜಟೆ ಬೆಳೆಸಿದಲ್ಲಿ ಪ್ರತ್ಯಕ್ಷನಾಗಲಿಕ್ಕೆ ಆತ ಸಾಲಿಗನಲ್ಲ. ಕೊಟ್ಟ ಸಾಲ ಬಾರದಿದ್ದ ಪಕ್ಷದಲ್ಲಿ ಇಂಥ ಕ್ರಮಗಳಿಂದ ಅಲ್ಪ ಸ್ವಲ್ಪ ಪ್ರಯೋಜನ ದೊರೆತರೂ ದೊರೆಯಬಹುದು. ಆತನು ಸಾಕ್ಷಾತ್ಕಾರಕ್ಕಾಗಿ ಇರುವ ನೇರ ಮಾರ್ಗವೆಂದರೆ ನಮ್ಮ ಅಷ್ಟಾಂಗಗಳಲ್ಲಿಯೇ ವ್ಯಾಪಿಸಿರುವ ದೇವನು ಈ ಅಷ್ಟಾಂಗಗಳನ್ನು ದೇವನ ವಾಸಕ್ಕಾಗಿ ಯೋಗ್ಯವಾಗುವಂತೆ ಶುದ್ಧವಾಗಿಸಿಕೊಂಡು ಸದಾಚಾರದಿಂದ ನಡೆದರೆ ಆತ ಖಂಡಿತವಾಗಿಯೂ ನಿನ್ನಲ್ಲಿಯೇ ವಾಸ ಮಾಡುತ್ತಾನೆ ಎಂಬುದು ಚೌಡಯ್ಯನ ನೇರ ನುಡಿ.

ಎಲ್ಲ ಶರಣರೂ ಮಾಯೆಗೆ ಮಾರು ದೂರ ಇರುವ ಮನೋವೃತ್ತಿಯವರು ಎಂಬ ಭಾವನೆ ಬರುತ್ತದೆ. ಇದಕ್ಕೆ ಚೌಡಯ್ಯನೂ ಹೊರತಾಗಿಲ್ಲ. ಅವನ ಕೆಳಗಿನ ವಚನವನ್ನು ಪರಾಂಬರಿಸುವದು ಸೂಕ್ತ.

ಅಡವಿಯ ಹೊಗಿಸುತ್ತ ನೀರಲ್ಲಿದ್ದಿತ್ತು
ಜಡೆಗಟ್ಟಿ ಭಸ್ಮ ಹೂಸಿ ರುದ್ರಾಕ್ಷಿ ತೊಡೊಸೊ
ಕಾಪು ಕಷಾಯವ ನುಡುಸುತ್ತ
ಹಿಡಿದೆತ್ತಿ ಕೇರುವ ಕೀಳಿಸಿ
ಹುಡಿಹುಚ್ಚುಗೊಳಿಸಿತ್ತು ಜಗಕೆಲ್ಲ
ಬೆಡಗು ಬೆರಗಿನ ಈ ಮಾಯೆಗೆ
ನಾಚುವೆನೆಂದ ಅಂಬಿಗರ ಚೌಡಯ್ಯ

ವಚನದ ತಾತ್ಪರ್ಯವೆಂದರೆ ನಳ ಮಹಾರಾಜನು ಅಡವಿ ಪಾಲಾಗಬೇಕಾಯಿತು. ಪರಾಕ್ರಮಿಯಾದ ದುರ್ಯೋಧನ ವೈಶಂಪಾಯನ ಸರೋವರದಲ್ಲಿ ಕಳ್ಳನಂತೆ ಅಡಗಿ ಕುಳಿತುಕೊಳ್ಳಬೇಕಾಯಿತು. ಸುಭದ್ರ ಪರಿಣಯ ಪ್ರಸಂಗದಲ್ಲಿ ಜಗದೇಕ ವೀರ ಎಂಬ ಬಿರುದು ಪಡೆದ ಪಾರ್ಥ ಜಡೆಗಟ್ಟಿ, ಬೂದಿ ಬಳಿದುಕೊಂಡು ರುದ್ರಾಕ್ಷಿ ಧಾರಣಮಾಡಿ ಸನ್ಯಾಸಿಯ ವೇಷ ಧರಿಸಬೇಕಾಯಿತು. ಜೈನಧರ್ಮ ಸಂಸ್ಥಾಪಕನಾದ ಪ್ರಥಮ ತೀರ್ಥಂಕರ ಮಹಾವೀರನು ಅಹಿಂಸಾ ಧರ್ಮದ ವ್ರತಧಾರಿಯಾಗಿ ತಲೆಯ ಕೂದಲು ಕಿತ್ತುಕೊಳ್ಳಬೇಕಾಯಿತು. ಈ ವಿಧವಾಗಿ ಮಾಯೆ ಜಗದ ಜನರನ್ನು ಪೀಡಿಸಿರುವುದನ್ನು ಚೌಡಯ್ಯ ಆಶ್ಚರ್ಯದಿಂದ ಗಮನಿಸುತ್ತಾ ಅದಕ್ಕೆ ನಾಚುವೆ ಎಂದಿದ್ದಾನೆ.

ಕೊನೆಯಲ್ಲಿ ಚಾಟಿಏಟಿನ ಚೌಡಯ್ಯನ ಅವಸಾನ ಹೇಗಾಯಿತು ಎಂಬ ಬಗ್ಗೆಯೂ ವಿವರಗಳು ದೊರೆತಿಲ್ಲ. ಬಹುಶಃ ಆತನೂ ಶರಣರ ದಂಡಿನೊಡನೆ ಉಳವಿಯ ಕಡೆಗೆ ಸಾಗಿ ಬಿಜ್ಜಳನ ಸೈನ್ಯದೊಡನೆ ಕಾದಾಡುತ್ತ ಐಕ್ಯನಾಗಿರ ಬಹುದು ಎಂದು ಭಾವಿಸಬಹುದಾಗಿದೆ. ಏಕೆಂದರೆ ಕಲ್ಯಾಣ ಕ್ರಾಂತಿಯನ್ನು ಮಟ್ಟಹಾಕಲು ಬಿಜ್ಜಳನ ಸೈನ್ಯ ಶತಾಯು ಗತಾಯು ಪ್ರಯತ್ನಿಸುತ್ತಿರುವಾಗ ನಿಷ್ಠುರವಾದಿ ಚೌಡಯ್ಯ ಸುಮ್ಮನೇ ಹೇಗಿದ್ದಾನು?

*

# ವಿಜ್ಞಾನಿಗಳ ದೃಷ್ಟಿಯಲ್ಲಿ ಬ್ರಹ್ಮಾಂಡ

-ಚೆನ್ನಬಸವಾನಂದ ಸ್ವಾಮೀಜಿ
ಬಸವಧಾಮ, ಅತ್ತಿವೇರಿ, ಹುನಗುಂದ(ಪೊ), ಮುಂಡಗೋಡ ತಾ., ಉ.ಕ. ಜಿಲ್ಲೆ.

ಅದೆಷ್ಟೋ ಕೋಟಿ ಕೋಟಿ ಶತಮಾನಗಳ ಹಿಂದಿನ ಮಾತು. ಆಗ ನಮ್ಮ ಆಕಾಶದಲ್ಲಿ ಈಗಿರುವಂತೆ ಸೂರ್ಯ ಚಂದ್ರರಾಗಲಿ ಭೂಮಿಯಾಗಲಿ ಇರಲಿಲ್ಲ. ಅಗ್ನಿಮಯವಾದ ಮೋಡದಂತೆ ಏನೋ ಪರಮಾಣು ಸಮೂಹ ಆಕಾಶದಲ್ಲೆಲ್ಲಾ ತುಂಬಿ ಹೋಗಿತ್ತು. ಪ್ರತಿ ಪರಮಾಣುವಿನಲ್ಲೂ ಒಂದು ಅಗಾಧವಾದ ಶಕ್ತಿಯಿತ್ತು. ಆ ಶಕ್ತಿಯ ಅಂತರಾಟಕ್ಕೆ ಸಿಕ್ಕಿದ ಆ ಪರಮಾಣು ಸಮೂಹ ಹರಿದು ಹಂಚಿ ಹೋಗೆಯಂತೆ ದಿಕ್ಕು ದಿಕ್ಕಿಗೆ ಚದುರಿ ಹರಿದಾಡುತ್ತಿತ್ತು.

ಪರಮಾಣು ಅತಿ ಸೂಕ್ಷ್ಮವಾದ ಗೋಳಾಕಾರವಾದುದು. ಒಂದು-ಅಂಗುಲವನ್ನು ಐದು ಕೋಟಿ ಪಾಲು ಮಾಡಿದರೆ ಒಂದು ಪಾಲು ಎಷ್ಟೋ ಅಷ್ಟು ಒಂದು ಪರಮಾಣುವಿನ ವ್ಯಾಸ. ತೂಕ ಒಂದು ಗುಲಗಂಜಿಯ ಹೇಳದಾರದಷ್ಟು ಪಾಲುಗಳ ಒಂದು ಭಾಗದಷ್ಟು ಪರಮಾಣುಗಳು ಸೇರಿ ಅಣು ಅಣುಗಳು ಸೇರಿ ವಸ್ತುಗಳಾಗಿವೆ. ಒಂದು ಗುಲಗಂಜಿಯ ಗಾತ್ರ ಕಬ್ಬಿಣ ತೆಗೆದುಕೊಂಡರೆ ಅದರಲ್ಲಿ ಕೋಟಿಗಟ್ಟಲೆ ಪರಮಾಣುಗಳಿವೆ.

ನಾವು ನೋಡುವ ವಸ್ತುಗಳು ನಮಗೆ ಕಾಣುವಂತೆ ಗಟ್ಟಿಯಾಗಿಲ್ಲ. ಬರೀ ಟೊಳ್ಳು. ಆ ಟೊಳ್ಳು ನಮ್ಮಿ ಕಣ್ಣಿಗೆ ಕಾಣುವುದಿಲ್ಲ. ಒಂದು ಮೀನು ಬಲೆಯಲ್ಲಿ ದಾರದ ಗಂಟುಗಳು ಇರುವಂತೆ ಪದಾರ್ಥದಲ್ಲಿ ಅಣುಗಳು ಸೇರಿವೆ. ಆ ಅಣುಗಳು ಗಟ್ಟಿಯಲ್ಲ. ಅವೂ ಟೊಳ್ಳೇ. ಅವುಗಳಲ್ಲಿರುವ ಪರಮಾಣುವೂ ಟೊಳ್ಳೇ. ಹೀಗಾಗಿ ಒಂದು ಮಣ ಕಬ್ಬಿಣದಲ್ಲಿರುವ ಆಕಾಶವನ್ನೆಲ್ಲಾ ತೆಗೆದು ಬಿಟ್ಟರೆ ಉಳಿಯುವ ಗಟ್ಟಿ ಕಡಲೆಕಾಳಿಗೂ ಸಣ್ಣವಂತೆ.

ಬ್ರಹ್ಮಾಂಡದಲ್ಲಿ ಎಲ್ಲ ವಸ್ತುಗಳಿಗೂ ಮೂಲವಾದ ಪರಮಾಣುವಿನ ರಚನೆಯನ್ನೇ ಸೂರ್ಯನೂ ಬ್ರಹ್ಮಾಂಡವೂ ಹೋಲುತ್ತದೆ. ಒಂದು ಪರಮಾಣುವನ್ನು ತೆಗೆದುಕೊಂಡರೆ ಅದರಲ್ಲಿ ಮುಖ್ಯವಾಗಿ ಪ್ರೋಟಾನ್ ಮತ್ತು ಎಲೆಕ್ಟ್ರಾನ್ ಎಂಬ ವಿದ್ಯುತ್ ಕಣಗಳಿರುತ್ತವೆ. ಸೂರ್ಯನ ಸುತ್ತ ಗ್ರಹಗಳು ಸುತ್ತುವಂತೆ ಪ್ರೋಟಾನಿನ ಸುತ್ತ ಎಲೆಕ್ಟ್ರಾನುಗಳು ಸುತ್ತುತ್ತಿರುತ್ತವೆ. ಒಂದು ಲೋಹದ ಚೂರೋ, ಕಲ್ಲಿನ ಚೂರೋ ಯಾವುದೋ ಒಂದು ವಸ್ತುವಿನ ಚೂರೋ ಅಲುಗದೆ ಬಿದ್ದಂತೆ ನಮಗೆ ಕಂಡರೂ ಅದರಲ್ಲಿ ತುಂಬಿರುವ ಪರಮಾಣುವಿನಲ್ಲಿರುವ ಎಲೆಕ್ಟ್ರಾನುಗಳ ಓಡಾಟ ನಡೆಯುತ್ತಲೇ ಇರುತ್ತದೆ.

ಇವೆಲ್ಲ ನಾವು ನಂಬಲಾರದೆ ಆಶ್ಚರ್ಯಗಳಾಗಿ ಕಾಣುತ್ತವೆ. ಆದರೆ ಈ ಸತ್ಯವನ್ನು ವಿಜ್ಞಾನಿಗಳು ಕಂಡು ಹಿಡಿದಿದ್ದಾರೆ. ಉದಾಹರಣೆ: ಅಣು ಸ್ಥಾವರಗಳಲ್ಲಿ ಅಣು ಉತ್ಪಾದನೆ ಹೇಗೆ ಮಾಡುತ್ತಾರೆಂದರೆ ಒಂದು ವಸ್ತುವನ್ನು ವಿಭಜಿಸುತ್ತ ಹೋಗುತ್ತಾರೆ. ವಿಭಜನೆ ಮಾಡುತ್ತ ಕೊನೆಗೆ ವಿಭಜನೆ ಮಾಡಲಿಕ್ಕೆ ಹಾಗದೆ ಇರುವುದೇ ಅಣು ಅದರಲ್ಲಿ ಅದ್ಭುತ ಶಕ್ತಿ ಇರುತ್ತದೆ.

ಕಾಲಕಳೆದಂತೆ ವಾತಾವರಣದ ಉಷ್ಣ ಕೊಂಚ ಕಡಿಮೆಯಾಯಿತು ಆಕಾಶವೆಲ್ಲ ತುಂಬಿ ಅತ್ತಿಂದಿತ್ತ ಹಾರಾಡುತ್ತಿದ್ದ ಪರಮಾಣುಗಳು ತಮ್ಮಲ್ಲುಂಟಾದ ಒಂದನ್ನೊಂದು ಆಕರ್ಷಿಸುವ ಶಕ್ತಿಯನ್ನು ಅನುಸರಿಸಿ ಒಂದೊಂದು ಕಡೆ ಒಟ್ಟುಗೂಡಿದವು. ಹೀಗೆ ಒಟ್ಟು ಗೂಡಿದ ಪರಮಾಣುಗಳ ಮೊತ್ತಗಳೊಂದೊಂದು ಒಂದೊಂದು ಗೋಳಾಕಾರವನ್ನು ಹೊಂದಿದವು. ಕಾಲ ಕಳೆದಂತೆ ಕ್ರಮೇಣ ಅವು ಸಂಕುಚಿತವಾಗತೊಡಗಿದವು. ಆ ಗೋಳಗಳಲ್ಲಿ ಅಣುಶಕ್ತಿಯ ಸಂಯೋಗದಿಂದುಂಟಾದ ಅಪಾರ ವಿದ್ಯುಚ್ಛಕ್ತಿಯುಂಟಾಯಿತು. ಅವು ವಿಕಿರಣಗಳುಳ್ಳ ಜಾಜ್ವಲ್ಯ ಮಾನವಾದ ಸೂರ್ಯರಾಗಿ ತಮ್ಮ ಜ್ವಾಲೆಯಿಂದ ಆಕಾಶವನ್ನೇ ಆವರಿಸಿಕೊಂಡವು. ಹೀಗುಂಟಾದ ಗೋಳಗಳಲ್ಲಿ ನಮ್ಮ ಸೂರ್ಯನೂ ಒಂದು. ಇಷ್ಟರಲ್ಲಾಗಲೀ ಇನ್ನೆಷ್ಟೋ ಸೂರ್ಯರು ಉದ್ಭವವಾಗಿ ಅಸಂಖ್ಯಾತ ಸೌರ ವ್ಯೂಹಗಳ ರಚನೆಯಾಯಿತು.

ಆಕಾಶದಲ್ಲಿ ಕಾಣುವ ನಕ್ಷತ್ರಗಳೆಲ್ಲಾ ನಮ್ಮ ಸೂರ್ಯನಂತಹ ಅದಕ್ಕಿಂತಲೂ ದೊಡ್ಡದಾದ ಸೂರ್ಯರು. ಆ ಒಂದೊಂದು ಸೂರ್ಯನ ಸುತ್ತಲೂ ನಮ್ಮ ಸೂರ್ಯನಿಗಿರುವಂತೆಯೇ ಗ್ರಹಗಳೂ ಉಪಗ್ರಹಗಳೂ ಇರಬಹುದು. ಒಂದೊಂದು ಸೂರ್ಯನೂ ನಮ್ಮ ಸೂರ್ಯನಂತೆಯೇ ಯೋಜನೆಗಟ್ಟಲೆ ಹಬ್ಬಿರುವ ಜ್ವಾಲೆಯುಳ್ಳದ್ದಾಗಿದೆ. ಹಲವು ಸೂರ್ಯರು ನಮ್ಮ ಸೂರ್ಯನಿಗಿಂತಲೂ ಅದೆಷ್ಟೋ ಬಾರಿ ದೊಡ್ಡದಾಗಿದ್ದರೂ ಅವು ನಮಗೆ ಬಲು ಬಲು ದೂರದಲ್ಲಿ ಇರುವುದರಿಂದ ಕಿರುತಾರೆಗಳಾಗಿ ಕಾಣುತ್ತವೆ. ಈ ಸೂರ್ಯ ಒಂದು ರೂಪಿಗೆ ಬಂದದ್ದು ಕೊಂಚ ಕಾಲದಲ್ಲಲ್ಲ. ಪರಮಾಣುಗಳು ಒಟ್ಟು ಸೇರಿ ಜಾಜ್ವಲ್ಯಮಾನ ಸೂರ್ಯರಾಗಬೇಕಾದರೆ ಅದೆಷ್ಟೋ ಕೋಟಿ ವರ್ಷಗಳು ಬ್ರಹ್ಮಾಂಡದ ನೀಹಾರಿಕೆಗಳಲ್ಲಿ ಇಂತಹ ಸೂರ್ಯರನ್ನು ಉತ್ಪತ್ತಿ ಮಾಡುವ ಕುಲುಮೆ ನಕ್ಷತ್ರಗಳ ಕಾರ್ಖಾನೆ.





ವಿಶ್ವದ ಹುಟ್ಟಿನ ಬಗ್ಗೆ ಅನೇಕ ಸಿದ್ಧಾಂತಗಳಿವೆ. ಅವುಗಳ ಪೈಕಿ ಹೆಚ್ಚು ಸಮ್ಮತವಾದುದು ಮಹಾಸ್ಫೋಟವಾದ ಮಹಾಸ್ಫೋಟದ ತರುವಾಯ ಆಕಾಶವೆಲ್ಲ ಪಾರದರ್ಶಕವಾಗುವದರೊಂದಿಗೆ ತಂಪಾಗಲು ಆರಂಭಿಸಿತು. ಅದು ಎಷ್ಟು ತಂಪಾಯಿತೆಂದರೆ ಅದರ ಉಷ್ಣತೆ ಸುಮಾರು 3 ಡಿಗ್ರಿ ಕೆಲ್ವಿನ್‌ಗಿಳಿಯಿತು. ಆಗ ಉತ್ಪನ್ನವದ ಬೆಳಕು ಇಡೀ ವಿಶ್ವವನ್ನೆಲ್ಲ ವ್ಯಾಪಿಸಿತು. ಮತ್ತು ಆಗ ಹುಟ್ಟಿಕೊಂಡ ಕಾಣದ ವಸ್ತುವನ್ನು ಖಗೋಳ ವಿಜ್ಞಾನಿಗಳು 'ಕಪ್ಪು ದ್ರವ್ಯ'ವೆಂದು ಕರೆದರು. ಈ ಕಪ್ಪುದ್ರವ್ಯವು ಮಡಿಕೆಗಳ ರೂಪದಲ್ಲಿ ಒಂದೆಡೆ ಸಂಗ್ರಹವಾಯಿತು. ಅದರೊಡನೆ ಅನಿಲ ಸಹ ಸೇರಿಕೊಂಡಿತು. ಅನಿಲವು ತಂಪಾಗಿ ನಕ್ಷತ್ರಗಳಾಗಿ ರೂಪುಗೊಂಡಿತು. ನಕ್ಷತ್ರಗಳ ಗುಂಪೇ ತಾರಾಮಂಡಲ.

ನಮ್ಮ ಸೂರ್ಯ ಉದ್ಭವವಾಗಿ ಈಗ ಐದು ನೂರು ಕೋಟಿ ವರ್ಷಗಳಾದವೆಂದು ಊಹೆ. ಈ ನಮ್ಮ ಸೂರ್ಯ ಇತರ ಸೂರ್ಯರಂತೆಯೇ ತನ್ನದೇ ಒಂದು ಆಕರ್ಷಣ ಶಕ್ತಿಯನ್ನೊಳಗೊಂಡಿತು. ಆದರೂ ಇನ್ನಾವುದೋ ಒಂದು ಸರ್ವಶಕ್ತಿಯ ಹಿಡಿತಕ್ಕೆ ಸಿಕ್ಕಿ ಇತರ ಸೂರ್ಯರಂತೆಯೇ ತನ್ನದೇ ಒಂದು ಪಥದಲ್ಲಿ ಬುಗುರಿಯಂತೆ ತಿರುಗುತ್ತ ಆ ಒಂದು ಕೇಂದ್ರವನ್ನು ಸುತ್ತಲು ಆರಂಭಿಸಿತು. ಹೀಗಿರುವಾಗ ಇದಕ್ಕಿಂತಲೂ ದೊಡ್ಡದಾದ ಒಂದು ಸೂರ್ಯ ತನ್ನ ಸುತ್ತಾಟದಲ್ಲಿ ಇದರ ಹತ್ತಿರದ ತನ್ನ ದಾರಿಯಲ್ಲಿ ಬಂತು ಆಕರ್ಷಣ ಶಕ್ತಿಯಿಂದ ಒಂದು ಮತ್ತೊಂದರ ಮೇಲೆ ತಮ್ಮ ಪ್ರಭಾವವನ್ನೂ ಬೀರಿದವು. ಒಂದನ್ನೊಂದು ತುಯ್ದಾಡಿದವು. ಆ ದೊಡ್ಡ ಸೂರ್ಯನ ಆಕರ್ಷಣ ಶಕ್ತಿ ಬಲವಾಗಿತ್ತು. ಅದರಿಂದ ನಮ್ಮ ಸೂರ್ಯನೇ ಪರಿಭವ ಹೊಂದಬೇಕಾಯಿತು. ಆದರೆ ಈ ಸೂರ್ಯನನ್ನೇ ಸೆಳೆದು ಬಿಡುವಷ್ಟಿರಲಿಲ್ಲ ಆ ಸೂರ್ಯನ ಶಕ್ತಿ. ಆದರೂ ಈ ಸೂರ್ಯನ ಸಡಿಲವಾಗಿದ್ದ ಭಾಗವನ್ನು ಅಯಸ್ಕಾಂತ ಕಬ್ಬಿಣದ ಚೂರುಗಳನ್ನು ಸೆಳೆಯುವಂತೆ ಸೆಳೆಯಿತು. ಈ ಸೆಳೆತಕ್ಕೆ ಸಿಕ್ಕದ ಭಾಗ ನಮ್ಮ ಸೂರ್ಯನಿಂದ ಸರಿದು ದೂರವಾಯಿತು. ಆದರೆ ಇದನ್ನೂ ಆಕರ್ಷಿಸಿದ ಸೂರ್ಯ ದೂರ ದೂರ ಸರಿಯಲು ಆ ಭಾಗ ಚೂರು ಚೂರಾಯಿತು ಇಷ್ಟೇ ಅಲ್ಲ. ಆ ಭಾಗಗಳೂ ಆ ಸೂರ್ಯನ ಆಕರ್ಷಣ ಶಕ್ತಿಗೆ ಮೀರಿದವು. ಹೀಗೆ ಹಾರಿ ಸೂರ್ಯನಿಂದ ದೂರ ಸರಿದ ಒಂದೊಂದು ತುಣುಕೂ ತಾನು ಎಲ್ಲಿಂದ ಹಾರಿ ಬಂತೋ ಆ ಸೂರ್ಯನ ಆಕರ್ಷಣ ಶಕ್ತಿಗೆ ಒಳಗಾಗಿ ಅದರೂ ಸುತ್ತಲೂ ತಿರುಗಲು ಪ್ರಾರಂಭಿಸಿತು. ಹೀಗೆ ಸೂರ್ಯನಿಂದ ಸಿಡಿದ ತುಂಡುಗಳಲ್ಲಿ ನಮ್ಮ ಭೂಮಿಯೊಂದು.

ಭೂಮಿಯ ಆಕರ್ಷಣೆ ಶಕ್ತಿಯ ಪ್ರಭಾವದಿಂದ ಗಾಳಿ, ನೀರು ನಮ್ಮ ಉಪಯೋಗಕ್ಕಾಗಿ ಉಳಿದಿದೆ. ಆಕಸ್ಮಾತ್ ಭೂಮಿಯಲ್ಲಿರುವ ಈ ಆಕರ್ಷಣ ಶಕ್ತಿ ಅಳಿದು ಹೋಯಿತೆನ್ನೋಣ ಆಗ ಏನಾಗುತ್ತದೆ? ಭೂಮಿಯ ಮೇಲಿರುವ ಪ್ರಾಣಿಗಳು, ನೀರು, ಗಾಳಿ, ಮೊದಲಾದ ವಸ್ತುಗಳೆಲ್ಲ ಆಕಾಶದಲ್ಲಿ ತೂರಿ ಎಲ್ಲೆಲ್ಲೊ ಏನೇನೋ ಆಗಿ ಹೋಗಿ ಬಿಡುತ್ತದೆ, ಅಷ್ಟೇ ಅಲ್ಲ ಭೂಮಿ ಧೂಳಿಪಟವಾಗಿ ಹೋಗಿ ಬಿಡುತ್ತದೆ. ಕಾರಣ ಒಂದು ಕಣಕ್ಕೆ ಇನ್ನೊಂದು ಕಣವನ್ನು ಆಕರ್ಷಿಸಿ ಹಿಡಿದು ಒಟ್ಟು ಗೂಡಿಸುವ ಶಕ್ತಿಯೇ ನಮ್ಮೀ ಪ್ರಪಂಚ ಹೀಗೆ ಮುದ್ದೆಯಾಗುಳಿಯಲು ಸಹಾಯಕವಾಗಿವೆ.

ಈ ಆಕರ್ಷಣಶಕ್ತಿಯ ಸೂತ್ರ ಅಖಂಡ ಬ್ರಹ್ಮಾಂಡದಲ್ಲಿ ವ್ಯಾಪಕವಾಗಿವೆ. ಆದುದರಿಂದಲೇ ಭೂಮಿಯು ಚಂದ್ರನನ್ನು ಚಂದ್ರನು ಭೂಮಿಯನ್ನು ಆಕರ್ಷಿಸುತ್ತವೆ. ಹೀಗೆಯೇ ಸೂರ್ಯನು ತನ್ನ ವ್ಯೂಹಗಳ ಗ್ರಹಗಳೆಲ್ಲ ಆಕರ್ಷಿಸುತ್ತದೆ. ಗ್ರಹಗಳ ವಿಷಯವೂ ಹಾಗೆ ಇದೇ ಸೂತ್ರ ಮಿಕ್ಕೆಲ್ಲ ನಕ್ಷತ್ರಗಳ ವಿಷಯದಲ್ಲೂ.

ಒಂದು ಕಾಲಕ್ಕೆ ಸೂರ್ಯನಿಂದ ಕಳಚಿಕೊಂಡ ಹಲವು ತುಣುಕುಗಳು ಒಂದೊಂದು ಒಂದೊಂದು ದೂರದಲ್ಲಿ ಸೂರ್ಯನ ಸೆಳೆತಕ್ಕೆ ಒಳಗಾಗಿ ಗೊತ್ತಾದ ಒಂದು ಮಾರ್ಗದಲ್ಲಿ ಸೂರ್ಯನ ಸುತ್ತಲೂ ಸುತ್ತುತ್ತವೆ. ಭೂಮಿಯೂ ಅವುಗಳಲ್ಲಿ ಒಂದು. ಇವುಗಳಿಗೆಲ್ಲಾ ಗ್ರಹಗಳೆಂದು ಹೆಸರು. ಸೂರ್ಯನಿಂದ ಅವುಗಳಿಗಿರುವ ದೂರವನ್ನು ಅನುಸರಿಸಿ ಕ್ರಮವಾಗಿ ಆ ಗ್ರಹಗಳ ಹೆಸರಿವು. ಬುಧ, ಶುಕ್ರ, ಭೂಮಿ, ಅಂಗಾರಕ, ಗುರು, ಶನಿ, ಯುರೆನಸ್, ನೆಪ್ಚೂನ್, ಪ್ಲೂಟೊ ಈ ಗ್ರಹಗಳು ಈವರೆಗೆ ಗೊತ್ತಾಗಿರುವುವು. ಇನ್ನೂ ಹಲವು ಗ್ರಹಗಳು ಇದ್ದಾವು ಎಂಬ ಅನುಮಾನವಿದೆ. ಭೂಮಿಗೆ ಚಂದ್ರನಿರುವಂತೆ ಮಿಕ್ಕ ಗ್ರಹಗಳಲ್ಲಿ ಹಲವಕ್ಕೆ ಉಪಗ್ರಹಗಳಿವೆ. ಬುಧ, ಶುಕ್ರ, ಅಂಗಾರಕ, ಗುರು, ಶನಿ, ಈ ಗ್ರಹಗಳನ್ನೂ ಬರಿಯ ಕಣ್ಣಿಂದ ನೋಡಬಹುದು. ಮಿಕ್ಕವುಗಳನ್ನು ನೋಡಲು ದೂರದರ್ಶಕ ಯಂತ್ರದ ಸಹಾಯ ಬೇಕು.

ಹೀಗೆ ಸೂರ್ಯನ ಸುತ್ತಲೂ ಗ್ರಹಗಳು. ಆ ಗ್ರಹಗಳ ಸುತ್ತಲೂ ಉಪಗ್ರಹಗಳಿವೆ. ಇಷ್ಟೇ ಅಲ್ಲ ಇನ್ನೊಂದು ಬಗೆಯ ವಸ್ತುಗಳಿವೆ. ಅವು ಧೂಮಕೇತುಗಳು. ಇವು ಸೂರ್ಯನ ಸುತ್ತಲೂ ಸುತ್ತುತ್ತಿರುತ್ತವೆ. ಆದರೆ ಇವುಗಳು ನಮಗೆ ಎಷ್ಟೋ ವರುಷಕ್ಕೊಮ್ಮೆ ಕಾಣಿಸಿಕೊಳ್ಳುತ್ತವೆ. ಅನ್ನು ಉಲ್ಕಾಪಾತಗಳು ರಾತ್ರಿ ಹೊತ್ತು ನಾವು ಆಕಾಶದ ಕಡೆ ನೋಡುತ್ತಿದ್ದರೆ ಒಮ್ಮೊಮ್ಮೆ ಒಂದು ಚುಕ್ಕಿ ಭೂಮಿಗೆ ಬಿದ್ದಂತೆ ಕಾಣುತ್ತದೆ. ಭೂಮಿಗೆ ಬಲು ದೂರದಲ್ಲಿ ಅಂತರಿಕ್ಷದಲ್ಲಿ ಬಂಡೆ ರೂಪದ ಹಲವು ಸಣ್ಣ ಪುಟ್ಟ ವಸ್ತುಗಳು ತೇಲುತ್ತಿರುತ್ತವೆ. ಹೀಗಿರುವಾಗ ಒಮ್ಮೊಮ್ಮೆ ಅವು ಭೂಮಿಗೆ ಹತ್ತಿರ ಬಂದು ಅದರ ಅಕರ್ಷಣೆಗೆ ಸಿಕ್ಕುತ್ತವೆ. ಆಗ ಭರದಿಂದ ಭೂಮಿಗೆ ಬೀಳುತ್ತವೆ. ಆ ಭರದಲ್ಲಿ ಭೂಮಿಯ ವಾತಾವರಣಕ್ಕೆ ಸಿಕ್ಕಿ ಬೆಂಕಿಯಾಗಿ ಭಸ್ಮವಾಗುತ್ತವೆ. ಅವೇ ಉಲ್ಕಾಪಾತಗಳು.

ಹೀಗೆ ಈ ವ್ಯೂಹಕ್ಕೆ ಕೇಂದ್ರ ಶಕ್ತಿಯಾಗಿರುವ ಸೂರ್ಯ. ಸೂರ್ಯನ ಆಕರ್ಷಣ ಶಕ್ತಿಗೆ ಒಳಗಾಗಿ ಅದರ ಸುತ್ತಲೂ ತಿರುಗುವ ಗ್ರಹಗಳು. ಈ ಗ್ರಹಗಳ ಆಕರ್ಷಣ ಶಕ್ತಿಗೆ ಒಳಗಾಗಿ ಅವುಗಳ ಸುತ್ತಲೂ ಸುತ್ತುವ ಉಪಗ್ರಹಗಳು ಸೇರಿ ಒಂದು ಸೌರವ್ಯೂಹ ಇಂತಹ ಸೌರವ್ಯೂಹಗಳು ಅದೆಷ್ಟೋ ಬ್ರಹ್ಮಾಂಡದಲ್ಲಿ.

ನಮಗೆ ಕಾಣುವ ಆಕಾಶಕ್ಕೆ ಕೊನೆ ಮೊದಲಿಲ್ಲ ಈ ಅನಂತ ಆಕಾಶಕ್ಕೆ ಬ್ರಹ್ಮಾಂಡವೆನ್ನುವರು. ಈ ಬ್ರಹ್ಮಾಂಡದ ವಿಷಯ ಮನೋರಂಜಕವಾದುದು. ರಾತ್ರಿ ವೇಳೆ ಆಕಾಶದ ಕಡೆಗೆ ತಿರುಗಿದರೆ ಅಸಂಖ್ಯ ನಕ್ಷತ್ರಗಳನ್ನು ನೋಡುವೆವು. ನಾವು ನೋಡುವ ನಕ್ಷತ್ರಗಳು ಸಾಮಾನ್ಯವಾಗಿ ಬೆಳ್ಳಗೆ ಕಾಣುತ್ತವೆ. ಅವುಗಳನ್ನು ಬಹಳ ಪ್ರಭಾವಶಾಲಿಯಾದ ದೂರದರ್ಶಕ ಯಂತ್ರದ ಮೂಲಕ ಪರೀಕ್ಷೆ ಮಾಡಿದರೆ ಒಂದು ಅದ್ಭುತ ಕಾಣುತ್ತದೆ. ಬಿಳಿಯ ನಕ್ಷತ್ರಗಳನ್ನು ನೋಡುವುದರ ಬದಲು ಆಕಾಶ ನಾವು ಊಹಿಸಬಹುದಾದ ಎಲ್ಲ ಬಣ್ಣಗಳ ನಕ್ಷತ್ರಗಳಿಂದ ತುಂಬಿದೆಯೆಂಬುದನ್ನು ಕಾಣಬಹುದು. ಅಲ್ಲಿ ಹಸಿರು ಹಾಗೂ ಕೆಂಪು ನಕ್ಷತ್ರಗಳು. ಕಣ್ಣನ್ನು ಕೋರೈಸುವಷ್ಟು ನೀಲಿ ಬಣ್ಣದಿಂದ ಕೂಡಿರುವ ನಕ್ಷತ್ರಗಳನ್ನು ನೋಡಬಹುದು.

ನಕ್ಷತ್ರಗಳು ಹಲವು ಬಣ್ಣದವುಗಳಾಗಿರುವುದಕ್ಕೆ ಕಾರಣ ವೇನು? ಯಾರಿಗೂ ನಿಖರವಾಗಿ ಏನೆಂಬುದು ತಿಳಿದಿಲ್ಲ. ಆದರೂ ಅನೇಕ ದೃಷ್ಟಾಂತಗಳಿಂದ ನಕ್ಷತ್ರದ ಬಣ್ಣಕ್ಕೂ ಅದರ ವಯಸ್ಸಿಗೂ ಸಂಬಂಧವಿರಬಹುದೆಂದು ತಿಳಿಯುತ್ತದೆ. ನೀಹಾರಿಕೆಯಿಂದ ಆಗ ತಾನೆ ಹೊರಬಿದ್ದ ಸೂರ್ಯ ಬಹುಶಃ ಕೆಂಪಗಿರಬಹುದು. ಹೀಗೆ ಅದು ಅಸಂಖ್ಯಾತ ಶತಮಾನಗಳ ಕಾಲ ಬೆಳಗುತ್ತದೆ. ಅಷ್ಟು ಕಾಲವೂ ಅದರಲ್ಲಿ ಸೇರಿಕೊಂಡಿರುವ ಪರಮಾಣುಗಳ ಪರಸ್ಪರ ಆಕರ್ಷಣೆಯಿಂದ ಒಂದೇ ಕಡೆಗೆ ದಟ್ಟವಾಗಿ ಸೇರುತ್ತಿರುತ್ತವೆ. ಕೆಂಪು ಸೂರ್ಯನಿಂದ ಅದು ಕಿತ್ತಲೆ ಬಣ್ಣದ ಸೂರ್ಯನೂ ಕೊನೆಗೆ ಬೇಕಾದಷ್ಟು ಶಾಖ ವನ್ನು ಬೀರುತ್ತಾ ಕಣ್ಣನ್ನು ಕೋರೈಸುವ ನೀಲಿಯ ಸೂರ್ಯನೂ ಆಗಿ ಸಂಘಟಿತವಾಗುತ್ತದೆ. ಆದರೆ ಅಲ್ಲಿಂದಾಚೆಗೆ ಅದರ ಶಾಖ ಹೆಚ್ಚುವುದಿಲ್ಲ. ಇದಕ್ಕೆ ಬದಲು ಸೂರ್ಯ ಕ್ರಮೇಣ ತಣ್ಣಗಾಗುತ್ತ ಹೋಗುತ್ತದೆ. ನೀಲಿಯ ಸೂರ್ಯನಿಂದ ಅದು ಕಿತ್ತಲೆಯ ಬಣ್ಣದ ಸೂರ್ಯ ನಾಗುತ್ತದೆ. ಕ್ರಮೇಣ–ಅದು ಮತ್ತೆ ಕೆಂಪು ಸೂರ್ಯನಾಗುತ್ತ ಮುದಿಯಾಗುತ್ತದೆ. ಆದರೆ ಅದು ಹುಟ್ಟಿದಾಗ ಇದ್ದುದಕ್ಕಿಂತ ಊಹಿಸಲಾರದಷ್ಟು ಸಣ್ಣಗೂ ಹೆಚ್ಚು ಘನೀಭೂತವೂ ಆಗಿರುತ್ತದೆ. ಇಲ್ಲಿಂದ ಮುಂದೆ ಅದರಲ್ಲಿ ವಿಶ್ವಕಿರಣ ಶಕ್ತಿ ಇರುವುದಿಲ್ಲ. ಹೀಗೆಯೇ ನಿಧಾನವಾಗಿ ಆರಿ ಸೂರ್ಯ ತಣ್ಣಗಾಗುತ್ತದೆ. ಆ ಮೇಲೆ ಕಾಲ ಕ್ರಮೇಣ ಅದೇನಾಗು ವುದೋ ಮತ್ತೆ ಅದು ಯಾವುದರಿಂದ ನಿರ್ವಾಣ ವಾಯಿಯೋ ಆ ಪರಮಾಣುವಾಗಿ ಒಡೆದು ಧೂಳಾಗಿ ಆಕಾಶವನ್ನು ತುಂಬಿ ಸೂರ್ಯನ ಪುನರ್ಜನ್ಮಕ್ಕೆ ಹದ ಗೊಳ್ಳುವುದೋ ಏನೋ!

ವಿಶ್ವದಲ್ಲಿ ನಾವು ತಿಳಿದಿರುವುದು ಕೇವಲ ಸ್ವಲ್ಪ ಭಾಗವನ್ನು ಮಾತ್ರ, ನಾವು ಲೆಕ್ಕಾಚಾರ ಮಾಡಿರುವ ಅಥವಾ ಊಹಿಸಿರುವ ಸ್ಥಳಕ್ಕಿಂತ ಬಹಳ ದೂರದಲ್ಲಿ ಇನ್ನೂ ಅದ್ಭುತವಾಗಿ ಆಶ್ಚರ್ಯಕರವಾದ ಪ್ರಪಂಚಗಳು ಇರಬಹುದು. ವಿಜ್ಞಾನಿಗಳು ಸತತ ಆಕಾಶದ ಕಡೆಗೆ ನೋಡುತ್ತಿರುತ್ತಾರೆ. ಆಕಾಶದಲ್ಲಿ ಕಾಣುವ ಚುಕ್ಕಿಗಳೆಲ್ಲ ಸೂರ್ಯರಲ್ಲ ಅವುಗಳಲ್ಲಿ ಎರಡು ಬಗೆ ಚುಕ್ಕಿಗಳು ಗ್ರಹಗಳು. ಕೆಲವು ಉಪಗ್ರಹಗಳು. ಮಿಕ್ಕವು ನಕ್ಷತ್ರಗಳು. ಆದರೆ ನಕ್ಷತ್ರಗಳಿಗೂ ಗ್ರಹಗಳಿಗೂ ಭೇದ ಕಂಡು ಹಿಡಿಯಲು ಒಂದು ಗುರುತಿದೆ. ನಕ್ಷತ್ರಗಳು (ಸೂರ್ಯರು) ಮಿನುಗುತ್ತವೆ. ಗ್ರಹಗಳು ಮಿನುಗುವುದಿಲ್ಲ. ಇದಕ್ಕೆ ಕಾರಣವುಂಟು. ನಕ್ಷತ್ರಗಳು ಸೂರ್ಯರಾಗಿದ್ದು ಉರಿಯುತ್ತಿರುವುದರಿಂದ ಸಹಜವಾಗಿಯೂ ಅವಕ್ಕೆ ಸ್ವಯಂ ಪ್ರಕಾಶವಿಲ್ಲ. ಸೂರ್ಯನ ಪ್ರಕಾಶ ಗ್ರಹಗಳ ಮೇಲೆ ಬಿದ್ದು ಅವುಗಳು ಹೊಳೆಯುವಂತೆ ಕಾಣುತ್ತವೆ. ಆದರೆ ಮಿನುಗು ವುದಿಲ್ಲ. ನಾವು ಚಂದ್ರನ ಮೇಲೆ ನಿಂತು ನಮ್ಮ ಭೂಗ್ರಹವನ್ನು ನೋಡಿದರೆ ಅದು ಮಾಸಿದ ನೀಲಿ ಬಣ್ಣದ ಗ್ರಹದಂತೆ ಕಾಣುವುದಂತೆ!.

ಬ್ರಹ್ಮಾಂಡದಲ್ಲಿ ಅಸ್ತವ್ಯಸ್ತವಾದ ವಿವಿಧ ನಕ್ಷತ್ರಗಳಿದ್ದರೂ ಸಾಧಾರಣವಾಗಿ ಎಲ್ಲವೂ ಒಂದೇ ಸಮನಾಗಿ ಕಾಣುತ್ತವೆ. ನಮ್ಮ ಕಣ್ಣಿಗೆ ಕಾಣುವ ನಕ್ಷತ್ರಗಳೆಲ್ಲವೂ ಬಹಳ ಸಮೀಪದಲ್ಲೇ ಇವೆಯೆಂದು ತೋರುತ್ತದೆ. ಅಷ್ಟೇ ಅಲ್ಲ. ಅವು ಒಂದಕ್ಕೊಂದು ತುಂಬ ಹತ್ತಿರದಲ್ಲಿರುವಂತೆ ಕಾಣುತ್ತವೆ. ಆದರೆ ನಿಜವಾಗಿ ಅವು ಒಂದೇ ಸಮನಾಗಿ ಇಲ್ಲ. ಒಂದಕ್ಕೆ ಇನ್ನೊಂದು ಅದೆಷ್ಟೋ ಪಟ್ಟು ದೊಡ್ಡದಾಗಿರಬಹುದು. ಅಥವಾ ಕಡಿಮೆ ಗಾತ್ರದ್ದಾಗಿಯೂ ಇರಬಹುದು.

ನಕ್ಷತ್ರಗಳಲ್ಲಿ ಒಂದಕ್ಕೆ ಇನ್ನೊಂದು ಇರುವ ದೂರ ಅದೆಷ್ಟೋ ಕೋಟಿ ಯೋಜನೆಗಲು ಈ ದೂರವನ್ನು ಅಂಕಿ ಇಟ್ಟು ತೋರಿಸುವುದು ಕಷ್ಟ. ಕೋಟ್ಯಂತರ ಯೋಜನೆಗಳ ದೂರದಿಂದ ನಾವು ಆ ನಕ್ಷತ್ರಗಳನ್ನು ನೋಡುತ್ತಿರುವುದರಿಂದ ಹಾಗೆ ಅವು ಹತ್ತಿರ ಹತ್ತಿರ ಕಾಣಿಸುತ್ತವೆ. ಸಂಖ್ಯೆಯಿಂದ ಗುರುತಿಸಲು ಆಗದ ದೂರ ಅಳೆಯಲು ಬೆಳಕು ಕಾಲ ಎಂಬ ಅಳತೆಯಿದೆ. ಬೆಳಕು ಒಂದು ಕ್ಷಣಕ್ಕೆ 1,86,326 ಮೈಲಿ ಹೋಗುವುದು. ಇದಕ್ಕೆ ಬೆಳಕು ಕಾಲ ಎನ್ನುವರು. ಈ ರೀತಿಯಲ್ಲಿ ಬೆಳಕು ಒಂದು ವರ್ಷದಲ್ಲಿ ಎಷ್ಟು ದೂರ ಹಾಯುವುದೋ ಅಷ್ಟಕ್ಕೆ ಜ್ಯೋತಿ ವರ್ಷವೆನ್ನುವರು. ಹಲವು ನಕ್ಷತ್ರಗಳಿಂದ ಬೆಳಕು ಹೊರಟು. ಆ ನಕ್ಷತ್ರಗಳು ಉದ್ಭವ ವಾದಾಗ ಈ ಪ್ರಮಾಣದಲ್ಲಿ ಭೂಮಿಗೆ ಮುಟ್ಟಬೇಕಾದರೆ ಐದು ವರ್ಷ, ಹತ್ತು ವರ್ಷ, ನೂರು ವರ್ಷ ಇನ್ನೂ ಹೆಚ್ಚು ಕಾಲ ಆಗಿದೆಯಂತೆ. ಇನ್ನೂ ಆಶ್ಚರ್ಯವೆಂದರೆ ಕೆಲವು ನಕ್ಷತ್ರಗಳ ಬೆಳಕು ಶತಮಾನಗಳ ಹಿಂದೆಯೇ ಹೊರಟಿದ್ದರೂ ಇನ್ನೂ ಭೂಮಿಗೆ ತಲುಪಿಲ್ಲವಂತೆ ಅಂದರೆ ಆ ನಕ್ಷತ್ರಗಳು ನಮಗೆ ಎಷ್ಟು ದೂರದಲ್ಲಿರಬಹುದು!.

ನಾವು ಜೀವಿಸುವುದು ಭೂಮಿಯ ಮೇಲೆ ಭೂಮಿ ಯೊಂದು ಗ್ರಹ ಭೂಮಿ ಸೇರಿದಂತೆ ಇತರ ಗ್ರಹಗಳು ಸೂರ್ಯನನ್ನು ಸುತ್ತುತ್ತಿವೆ. ಆದರೆ ಸೂರ್ಯ ಒಂದು ನಕ್ಷತ್ರ/ ಸೂರ್ಯನಂತಹ ಸಹಸ್ರಾರು ನಕ್ಷತ್ರಗಳು ಒಂದೊಂದು ತಾರಾ ಮಂಡಲದಲ್ಲಿ ಸುಮಾರು 20ಸಾವಿರ ಕೋಟಿ ನಕ್ಷತ್ರಗಳಿರು ವುದುಂಟು. ಹಾಗೆಯೇ ವಿಶ್ವದಲ್ಲಿ 20 ಸಾವಿರ ಕೋಟಿ ತಾರಾ ಮಂಡಲಗಳಿರಬಹುದೆಂದು ಅಂದಾಜು ಮಾಡಿದ್ದಾರೆ. ತಾರಾ ಮಂಡಲಗಳ ಆಕಾರಗಳಲ್ಲೂ ವೈವಿಧ್ಯತೆಯಿದೆ. ಕೆಲವು ಗೋಲಾಕಾರವಿದ್ದರೆ, ಮತ್ತೆ ಕೆಲವು ಸರ್ಪಿಲಾಕಾರವಾಗಿರುತ್ತವೆ. ನಾವು ವಾಸಿಸುವ ಅಂದರೆ ನಮ್ಮ ಸೌರವ್ಯೂಹದಿಂದ ತಾರಾಮಂಡಲ ಇಡ್ಲಿಯಾಕಾರದ್ದಿದೆ. ನಮ್ಮ ತಾರಾ ಮಂಡಲಕ್ಕೆ ಕ್ಷೀರಪಥ ಎಂದು ಹೆಸರು.

ಗ್ರಹ ನಕ್ಷತ್ರಗಳ ವೀಕ್ಷಣೆಗಾಗಿ ಗೆಲಿಲಿಯೋ ಪ್ರಥಮ ದೂರದರ್ಶಕವನ್ನು ತಯಾರಿಸಿದ ನಂತರ ಸುಧಾರಿತ ಹೊಸ ಹೊಸ ದೂರದರ್ಶಕಗಳ ಸೃಷ್ಟಿಯಾಯಿತು. ರೇಡಿಯೋ ತರಂಗಗಳನ್ನು ಉತ್ಕರ್ಷಿಸುವ ಆಕಾಶ ಕಾಯಗಳನ್ನೂ ಗುರುತಿಸಲು ರೇಡಿಯೋ ದೂರದರ್ಶಕದ ನಿರ್ಮಾಣ ಸಹ ಇಂದು ಸಾಧ್ಯವಾಗಿದೆ. ಇಷ್ಟೆಲ್ಲ ಸಂಶೋಧನೆಗಳು ನಡೆದಾಗ್ಯೂ ತಾರಾಮಂಡಲಗಳ ಅನೇಕ ವಿದ್ಯಮಾನಗಳಿಗೆ ಸ್ಪಷ್ಟವಾದ ಉತ್ತರವನ್ನು ನೀಡಲು ಇನ್ನೂ ಸಾಧ್ಯವಾಗಿಲ್ಲ.

ಕಾರ್ಗತ್ತಲಿನ ನಿರಭ್ರ ಆಗಸದಲ್ಲಿ ಬರಿಗಣ್ಣಿಗೆ ಕಾಣುವ ನಕ್ಷತ್ರಗಳ ಸಂಖ್ಯೆ ಆರು ಸಾವಿರ ಮೀರುವುದಿಲ್ಲ. ಆದರೆ ನಕ್ಷತ್ರ ಲೋಕ ಅಷ್ಟೊಂದು ಸೀಮಿತವಲ್ಲ. ಇಡೀ ವಿಶ್ವದಲ್ಲಿರುವ ಅನಂತ ಅಂತರಿಕ್ಷದಲ್ಲಿ ಹರಡಿರುವ ನಕ್ಷತ್ರಗಳ ಸಂಖ್ಯೆ ಒಂದು ನೂರು ಕೋಟಿ ಕೋಟಿ ಕೋಟಿ ಕೋಟಿ ( 1ರ ಮುಂದೆ 30 ಸೊನ್ನೆಗಳನ್ನು ಬರೆದಾಗ ಬರುವ ಸಂಖ್ಯೆ) ಎಂಬುದು ಇತ್ತೀಚಿನ ತಾರಗಣತಿಯ ಅಂಕಿ ಅಂಶ!.

ಆದರೆ ಆಶ್ಚರ್ಯ ಏನೆಂದರೆ ವಿಶ್ವದಲ್ಲಿರುವ ಇಷ್ಟು ತಾರೆಗಳ ಆಕಾಶದಲ್ಲಿ ಸಮಾನ ದೂರಗಳಲ್ಲೇನೂ ಹರಡಿಲ್ಲ. ಅವು ಅಲ್ಲಲ್ಲಿ ಗುಂಪು ಗುಂಪಾಗಿವೆ. ಸರಾಸರಿ ಸುಮಾರು ಹತ್ತು ಸಾವಿರ ಕೋಟೀ ನಕ್ಷತ್ರಗಳು ಒಟ್ಟೊಟ್ಟಾಗಿರುವ ಇಂಥ ಗುಂಪುಗಳೇ 'ಗ್ಯಾಲಾಕ್ಸಿ' ಗಳು. ಹಾಗೆಂದು ಗ್ಯಾಲಕ್ಸಿ ಗಳಲ್ಲಿರುವುದು ಕೇವಲ ನಕ್ಷತ್ರಗಳಷ್ಟೇ ಏನಲ್ಲ. ಪ್ರತಿ ಗ್ಯಾಲಕ್ಸಿ ಯಲ್ಲೂ ನಕ್ಷತ್ರಗಳ ಜೊತೆಗೆ ಅಪಾರ ಅನಿಲ ರಾಶಿಗಳು ಹರಡಿವೆ. ಅಂಥ ಅನಿಲ ರಾಶಿ ಅಲ್ಲಲ್ಲಿ ದಟ್ಟವಾಗಿ ಸಾಂದ್ರವಾಗಿ 'ನೀಹಾರಿಕೆ' ಗಳಾಗಿವೆ ಮುದಿ ನಕ್ಷತ್ರಗಳು ಸಿಡಿದು ಚೆಲ್ಲುವ ದ್ರವ್ಯವೇ ಇಂತಹ ಅನಿಲ ಮೋಡಗಳಿಗೆ ಮೂಲ ಆಕರ. ಹೊಸ ಹೊಸ ತಾರೆಗಳ ಜನನಕ್ಕೆ ಮೂಲದ್ರವ್ಯ ಅದೇ.

ನಕ್ಷತ್ರಗಳು ಬಗೆ ಬಗೆಯ ನೀಹಾರಿಕೆಗಳು ನಮ್ಮ ಸೌರವ್ಯೂಹದಂತಹ ಗ್ರಹವ್ಯೂಹಗಳು ಅನಿಲ–ದೂಳುಗಳ ರಾಶಿ ಗಳು ಮುಂತಾದುವವನ್ನೆಲ್ಲ ಒಳಗೊಂಡ ಪ್ರತಿ ಗ್ಯಾಲಕ್ಸಿಯದೂ ಕಲ್ಪನಾತೀತಗಾತ್ರ. ಯಾವುದೇ ಗ್ಯಾಲಕ್ಸಿ ಉದ್ದ ಅಗಲ ದಪ್ಪ ಒಂದೊಂದು ಹತ್ತಾರು ಸಾವಿರ ಅಥವಾ ಲಕ್ಷಾಂತರ 'ಜ್ಯೋತಿರ್ವರ್ಷ'ದ ಅಳತೆ ಮುಟ್ಟುತ್ತದೆ. ಗ್ಯಾಲಕ್ಸಿಯಿಂದ ಗ್ಯಾಲಕ್ಸಿಗೂ ಅಂಥದೇ ಅಂತರ.

ವಿಶ್ವದಲ್ಲಿರುವ ಒಟ್ಟು ಹತ್ತು ಕೋಟಿ ಕೋಟಿ ಗ್ಯಾಲಕ್ಸಿ ಗಳದೆಲ್ಲ ಒಂದೇ ಆಕಾರ ಏನಲ್ಲ ಗ್ಯಾಲಾಕ್ಸಿಗಳದು ಪ್ರಧಾನವಾಗಿ ತ್ರಿವಿಧ ಆಕಾರ ಅವನ್ನು ಆದರಿಸಿಯೇ ಗ್ಯಾಲಾಕ್ಸಿಗಳಿಗೆ ತ್ರಿವಿಧ ಹೆಸರುಗಳೂ ಕೂಡ. 'ಅಲಿಪ್ಟೀಯ ಗ್ಯಾಲಕ್ಸಿ' 'ಸುರುಳಿ ಗ್ಯಾಲಕ್ಸಿ' ಮತ್ತು ಅನಿಯತ ಗ್ಯಾಲಕ್ಸಿ. ನಮ್ಮ ಸೌರವ್ಯೂಹದ ನೆಲೆಯಾದ 'ಕ್ಷೀರಪಥ' ಒಂದು ಸುರುಳಿ ಗ್ಯಾಲಕ್ಸಿ ಆಕಾಶದಲ್ಲಿ ಬರಿಗಣ್ಣಿಗೆ ಗೋಚರಿಸುವ ಗ್ಯಾಲಕ್ಸಿ ಇದೊಂದೇ.

ಖಗೋಳ ವಿಜ್ಞಾನದಲ್ಲಿ ಕ್ರಾಂತಿ ಮಾಡುತ್ತ ಏಳು ವರ್ಷಗಳಲ್ಲಿ ನಿರಂತರ ಯಾನ ಮಾಡಿ 200 ಕೋಟಿ ಮೈಲಿದಾಟುತ್ತ ಶುಕ್ರ ಭುವಿ, ಗುರುವಿನ ಗುರುತ್ವದಲ್ಲಿ ಬಲವರ್ಧಿಸಿಕೊಂಡು ಒಂದರಿಂದ ಒಂದಕ್ಕೆ ಜಿಗಿಯುತ್ತ ಶನಿಯ ಬೆನ್ನೇರಿದ ಕ್ಯಾಸಿನಿ ನೌಕೆ ಈಗ ಇನ್ನು ಮೂರು ವರ್ಷಕಾಲ ಶನಿಯುನ್ನು ಸುತ್ತಲಿದೆ. 27 ದೇಶಗಳ ನೆರವಿನೊಡನೆ ಯೂರೋಪಿಯನ್ ಸ್ಪೇಸ್ ಏಜೆನ್ಸಿ ನಾಸಾ ಮತ್ತು ಇಟಾಲಿಯನ್ ಸ್ಪೇಸ್ ಏಜೆನ್ಸಿ ಕೈಗೊಂಡ ಮಹತ್ತರ ಯೋಜನೆ ಇದು. ಶನಿಯ ಟೈಟಾನ್ ಉಪಗ್ರಹದ ಮುಸುಕು ತೆರೆಸಿ ಅದರೊಳಗೆ ಹ್ಯೂಜನ್ ಎಂಬ ಶೋಧ ಯಂತ್ರವನ್ನು ಇಳಿಸಿದ್ದು ಹೊರ ಸೌರಗ್ರಹದಲ್ಲಿ ಕೈಗೊಂಡ ಮೊದಲ ಯಶಸ್ವಿ ಯೋಜನೆ ಎನ್ನಿಸಿತು. ಮೂರು ವರ್ಷದಲ್ಲಿ ಶನಿಯನ್ನು ಸುತ್ತುತ್ತ ತನ್ನ ಕಾರ್ಯ ಮುಗಿಸುವ ವೇಳೆಗೆ ಅದು 74 ಬಾರಿ ಪ್ರದಕ್ಷಣೆ ಹಾಕಿರುತ್ತದೆ.

ಬ್ರಹ್ಮಾಂಡದ ಬೇರೆ ಬೇರೆ ಗ್ರಹ ಮತ್ತು ಉಪಗ್ರಹಗಳಲ್ಲಿ ಜೀವಿಗಳು ಇರಬಹುದೆಂದು ಕೆಲವು ವಿಜ್ಞಾನಿಗಳು ಒಪ್ಪಿಕೊಂಡರು.

ಆ ಗ್ರಹಗಳಿಗೆ ಹೋಗಲು ಪ್ರಯತ್ನಿಸುತ್ತಿರುವವರು. ಬಾಹ್ಯಾಕಾಶದ ಜೀವಿಗಳು ಹಾಗಾಗ ಈ ಭೂಮಿಗೆ ಬಂದು ಹೋಗುತ್ತಿರುವವರು. ನಮ್ಮಕ್ಕಿಂತಲೂ ವೈಜ್ಞಾನಿಕವಾಗಿ ಮುಂದುವರಿದಿರಬೇಕು. ಸಾವಿರಾರು ಜನರು ತಮ್ಮನ್ನು ಬಾಹ್ಯಾಕಾಶದ ಜನ ಬಂದು ಅಪಹರಿಸಿಕೊಂಡು ಹೋಗಿ ಕೆಲ ಕಾಲ ಬಂಧನದಲ್ಲಿ ಇರಿಸಿದ್ದರೆಂದು ಹೇಳುವುದನ್ನು ನಾವು ಕೇಳುತ್ತಲೇ ಇದ್ದೇವೆ. 1957ರಲ್ಲಿ ಇಂಥ ಒಂದು ಸಂಗತಿ ಮೊದಲಿಗೆ ವರದಿಯಾಯಿತು. ಆಗ ಅದನ್ನು ಯಾರೊಬ್ಬರೂ ಗಂಭೀರವಾಗಿ ಪರಿಗಣಿಸಲಿಲ್ಲ. ಆ ಮೇಲೆ 1970ರಲ್ಲಿ ನ್ಯೂಯಾರ್ಕ್‌ದ ಕಲಾವಿದ ಬುಡ್ ಹಾಫ್ ಬಾಹ್ಯಾಕಾಶದ ಜನ ಬಂದು ಅಪಹರಿಸಿದ ಸಂಗತಿಯನ್ನು ತಿಳಿಸಿದ ನಂತರ ಅಪಹರಣಕ್ಕೊಳಗಾದ ಜನರನ್ನು ಮಾನಸಿಕ ಶಾಸ್ತ್ರಜ್ಞರ ಹಿಪ್ನಾಟಿಸ್ಟರಾ ಪರೀಕ್ಷೆಗೆ ಒಳಪಡಿಸಿದರು.

ಅವರು ಯಾರೊಬ್ಬರೂ ತಮ್ಮನ್ನು ಬಾಹ್ಯಾಕಾಶ ನೌಕೆಗೆ ಹೇಗೆ ಕರೆದುಕೊಂಡು ಹೋಗಲಾಯಿತು ಎಂಬುದನ್ನು ಮಾತ್ರ ಹೇಳಲಿಲ್ಲ. ಆದರೆ ತಾವು ಬಾಹ್ಯಾಕಾಶ ನೌಕೆಯಲ್ಲಿ ಇದ್ದ ಸಂಗತಿಯನ್ನು ಮಾತ್ರ ಅವರೆಲ್ಲರೂ ಹೇಳಿದರು. ಹಿಪ್ನಾಟಿಸಮ್‌ಗೆ ಒಳಗಾದ ಜನರು ಹೇಳಿದ ಸಂಗತಿಗಳೆಲ್ಲವೂ ಒಂದೇ ತೆರನಾಗಿದ್ದವು. ಅವರು ಒಂದು ವಿಲಕ್ಷಣ ಪ್ರಕಾಶವನ್ನು ಕಂಡು ಅದನ್ನು ಕಂಡೊಡನೆಯೇ ಪ್ರಜ್ಞೆ ಕಳೆಯಿತು. ಒಂದು ವಿಲಕ್ಷಣ ಕೋಣೆಯಲ್ಲಿ ಅವರಿಗೆ ಎಚ್ಚರವಾಯಿತು. ಅವರನ್ನು ಬಾಹ್ಯಾಕಾಶದ ಜನರು ಸುತ್ತುವರೆದಿದ್ದರು. ಅವರಲ್ಲಿ ವಿಲಕ್ಷಣ ಯಂತ್ರಗಳಿದ್ದವು. ಅಪಹರಣಗೊಂಡವರ ಚರ್ಮ, ರಕ್ತ ಹಾಗೂ ದೇಹದ ದ್ರವಗಳ ಸ್ಯಾಂಪಲ್ ತೆಗೆದುಕೊಂಡರು. ಅವರು ಪುನಃ ಪ್ರಜ್ಞೆ ಕಳೆದುಕೊಂಡರು. ಅವರಿಗೆ ಪುನಃ ಎಚ್ಚರವಾದಾಗ ಅಪಹರಣಗೊಳ್ಳುವ ಮೊದಲು ಅವರು ಎಲ್ಲಿದ್ದರೂ ಅದೇ ಸ್ಥಳದಲ್ಲಿ ಇದ್ದರು.

ಇಂಗ್ಲೆಂಡಿನ ಹನ್ನಿಂಗ್‌ಟನ್‌ನಲ್ಲಿ 1977 ನವೆಂಬರ್ 26ರಂದು ಸಂಜೆ ಟಿ.ವಿ. ಪ್ರಸಾರದಲ್ಲಿ ಜನರು ಒಂದು ಕಾರ್ಯಕ್ರಮವನ್ನು ವೀಕ್ಷಿಸುತ್ತಿದ್ದರು. ಆ ಪ್ರಸಾರ ರದ್ದಾಗಿ ಬೇರೆ ಪ್ರಸಾರ ಪ್ರಾರಂಭವಾಯಿತು. ಒಬ್ಬ ವ್ಯಕ್ತಿ ಕಾಣಿಸಿಕೊಂಡು 'ನಾನು ಬೇರೆ ಲೋಕದಿಂದ ಬಂದಿದ್ದೇನೆ. ನಿಮಗೆ ಕೆಲವು ಸೂಚನೆ ನೀಡುವುದು ನನ್ನ ಉದ್ದೇಶ. ನಿಮ್ಮ ವಿಜ್ಞಾನಿಗಳು ಮತ್ತು ರಾಜಕಾರಣಿಗಳು ಶಾಂತಿಗಾಗಿ ಅಣು ಎಂದು ಅಣು ಬಾಂಬ್ ಇತ್ಯಾದಿ ಸ್ಫೋಟಕ ವಸ್ತುಗಳನ್ನು ಉತ್ಪಾದನೆ ಮಾಡುತ್ತಿರುವುದು ಇದು ತುಂಬಾ ಅಪಾಯಕಾರಿಯಾಗಿರುತ್ತದೆ. ಭೂಮಿಯ ಜೀವಿಗಳ ಸರ್ವನಾಶಕ್ಕೆ ಕಾರಣವಾಗುತ್ತದೆ. ಇದರಿಂದ ಭೂಮಿಗೆ ತೊಂದರೆಯಾಗುತ್ತದೆ ಅದಕ್ಕಾಗಿ ತಾವೆಲ್ಲ ವಿಜ್ಞಾನಿಗಳಿಗೆ ಮತ್ತು ರಾಜಕಾರಣಿಗಳಿಗೆ ಹೇಳಿ ಅನಾಹುತವನ್ನು ತಪ್ಪಿಸಬೇಕೆಂದು ತಿಳಿಸುತ್ತಿರುವೆನು ಎಂದು ಹೇಳಿ ಆ ವ್ಯಕ್ತಿ ಚಿತ್ರ ಮಾಯವಾಯಿತು. ನಂತರ ಟಿ.ವಿ. ವೀಕ್ಷಿಸುತ್ತಿರುವವರು ಇದೇನು ಕಾರ್ಯಕ್ರಮದ ಮಧ್ಯೆ ಈ ರೀತಿ ಹೇಳಿದರಲ್ಲಾ ಎಂದು ಟಿ.ವಿ. ಕೇಂದ್ರಕ್ಕೆ ತಿಳಿಸಿದಾಗ ಅವರು ತಾವು ಆ ವಿಷಯವಾಗಿ ಪ್ರಸಾರ ಮಾಡಿಲ್ಲವೆಂದು ತಿಳಿಸಿದಾಗ ಆಶ್ಚರ್ಯವಾಗುತ್ತದೆ. ಅನ್ಯಗ್ರಹದ ಜೀವಿಗಳು ವೈಜ್ಞಾನಿಕವಾಗಿ ಎಷ್ಟು ಮುಂದುವರೆದಿರಬಹುದು. ಅವರು ಹಾರುವ ತಟ್ಟೆಗಳಲ್ಲಿ ಬರುತ್ತಾರೆ ಅವರನ್ನು ಹಿಡಿಯಲು ಪ್ರಯತ್ನಿಸಿದರು ಅವರು ಸಿಕ್ಕಿಲ್ಲ. ಅವರ ವೇಗ ಜಾಸ್ತಿ ಇರುವುದರಿಂದ ಹಿಡಿಯಲು ಇವರಿಂದ ಸಾಧ್ಯವಾಗಿಲ್ಲ.

*

## ವಚನಾಮೃತ

(ಅಂತರಂಗ ದರ್ಶನ) – ತೇಜಸ್ವಿನಿ ಅರಸ್

ನೇರಾದ ಬಿನ್ನಹಕೆ  
ಸೂರಾಗಿ ನೀವಿರಲ್ಕೆ  
ಬೇರಾವ ಪದಬೇಕೆನಗೆ ?  
ನಾರಾಗಿ ಬಿನ್ನಹಿಪೆ  
ಬೇರಾಗಿ ಸಲಹುತಿರಿ ।

ಶಬ್ದ –ಸ್ಪರ್ಶ–ರೂಪ–ರಸ– ಗಂಧಗಳ  
ಹಂಗಿರದ ಬ್ರಹ್ಮತ್ವ ಬೇಡೆನಗೆ  
ಆ ಎಲ್ಲವನು ನುಂಗಿ 'ಶ್ವಾಸ'ವಾಗಿಹ  
'ಕವಿತ್ವ'ವೇ ಸಾಕೆನಗೆ ।

ಸರ್ವಶಕ್ತನು ನೀನು, ಸವಕಲುಳಿ ನಾನು ।  
ಸರಿಸಮವೆ ನನನಿನಗೆ ಸತ್ಯಶೋಧಿಪೆಯೇಕೆ ?  
ಸರಿದಾರಿಯಲಿ ನಡೆಸೊ ಸರ್ವಾಧಿಕಾರಿ ನೀ ।  
ಮುಂದೆನ್ನ ಪ್ರತಿಹೆಜ್ಜೆ ನಿನ್ನದೇ ತಂದೆ ।

ಹರಿದಾಡೊ ಮನ ಸ್ಥಿರವಾಗಿ  
ತನುವೇ ಶಿವಾಲಯವಾಗಿ  
ಆತ್ಮವೇ ಶಿವಲಿಂಗವಗಿ  
ಆರಾಧನೆಯೇ ಅರ್ಚನೆಯಾಗಿ  
ಭವಹರ ನೀ ಎನ್ನ ಸೆರೆಯೌ ।

ಅರಿತೆನೆಂದೆಡೆ ನಿನ್ನ ಎನ್ನಯ್ಯ ಹಿರಿಮೆಗೆಡೆಯಾಯ್ತು  
ಅರಿಯೆನೆಂದಡೆ ನಿನ್ನ ಎನ್ನಯ್ಯ ಕಿರಿಮೆಗೆಡೆಯಾಯ್ತು  
ಅರಿವಬರ ಹಿಂಗಿಸುವ ಗುರುವಾಗಿ ಎನ್ನಯ್ಯ  
ಕರುವ ಮಾಡಿಕೊ ಎನ್ನ ಹಸಿವು ಹೆಚ್ಚಾಯ್ತು ॥

– ತೇಜ ನಿನದ ॥







ಶ್ರೀ ಎನ್. ಲಿಂಗಪ್ಪನವರು

ಶ್ರೀಸಿದ್ಧಗಂಗಾ ಸುಕ್ಷೇತ್ರದಲ್ಲಿ ನಡೆಯುತ್ತಿರುವ ಅತ್ಯಪೂರ್ವ 'ಮಹಾದಾಸೋಹ' ಪರಂಪರೆಗೆ ಬಸವಾದಿ ಶರಣರು ಆಚರಿಸಿ ತೋರಿಸಿದ ಸದ್ಭಾವದ ಸುಸಂಸ್ಕೃತ ಸಂಪ್ರದಾಯವೇ ಸತ್ಪ್ರೇರಣೆಯಾಗಿರುವುದನ್ನು ಗಮನಿಸಿದ ಹೃದಯವಂತ ಉದಾರಮನದ ಭಕ್ತಾದಿಗಳು ಭಕ್ತಿ ಕಾಣಿಕೆಯನ್ನು ಸಮರ್ಪಿಸುತ್ತಿರುವುದು ಪುಣ್ಯ ವಿಶೇಷವೇ ಆಗಿದೆ. ಈ ಶಿವಪಥಕ್ಕೆ ಕಾರಣಪುರುಷರಾದ ಶ್ರೀ। ಮ। ನಿ। ಪ್ರ ಸ್ವ ಡಾ॥ ಶ್ರೀ ಶ್ರೀ ಶಿವಕುಮಾರಮಹಾಸ್ವಾಮಿಗಳವರಲ್ಲಿ ಅನನ್ಯ ಭಕ್ತಿ ಶ್ರದ್ಧೆಯುಳ್ಳ ಅಪಾರ ಸಂಖ್ಯೆಯ ಭಕ್ತಾದಿಗಳು ಶ್ರೀಗುರುಚರಣಗಳಲ್ಲಿ ತ್ರಿಕರಣ ಶುದ್ಧಿಯಿಂದ ಕಾಣಿಕೆಯನ್ನು ಸಮರ್ಪಿಸಿ ಧನ್ಯಭಾವ ತೃಪ್ತರಾಗುತ್ತಿರುವುದು ಅನುಕರಣೀಯ ವಾದುದಾಗಿದೆ.

ಗುರು ತೋರಿದ ಸೇವಾಪಥದಲ್ಲಿ ಶ್ರೀ ಎನ್. ಲಿಂಗಪ್ಪ ಮತ್ತು ಮಕ್ಕಳು ಒಂದು ಲಕ್ಷದ ಮೋಲೊಂದು ರೂಗಳನ್ನು 'ಮಹಾದಾಸೋಹ' ನಿಧಿಗೆ ಸಮರ್ಪಿಸಿ ಕೃತಾರ್ಥರಾಗಿದ್ದಾರೆ. ಶ್ರೀ ಲಿಂಗಪ್ಪನವರು ಶಿಕ್ಷಕರಾಗಿ ಸೇವೆಸಲ್ಲಿಸಿ ನಿವೃತ್ತರಾಗಿದ್ದಾರೆ. ಬೆಂಗಳೂರು ನಗರ ಜಿಲ್ಲೆ ಕೆಂಪಾಪುರ ಗ್ರಾಮ ನಿವಾಸಿಗಳಾದ ಶ್ರೀಯುತರು ಆದರ್ಶ ಶಿಕ್ಷಕರಾಗಿ, ಉತ್ತಮ ಗೃಹಸ್ಥರಾಗಿ, ಗುರು–ಲಿಂಗ–ಜಂಗಮ ಪ್ರೇಮಿಗಳಾಗಿ, ಉತ್ತಮಗೃಹಸ್ಥರಾಗಿ, ಸರಳ ಸಜ್ಜನಿಕೆಯ ಸಭ್ಯರಾಗಿ ಗ್ರಾಮದ ಕಣ್ಮಣಿಗಳೆನಿಸಿರುವುದು ಸಂತೋಷ ವನ್ನುಂಟುಮಾಡಿದೆ. ಶ್ರೀ ಲಿಂಗಪ್ಪನವರ ಮಕ್ಕಳೂ ಸಹ ಸುಯೋಗ್ಯ ತಂದೆಯ ಸುಯೋಗ್ಯ ಪುತ್ರರಾಗಿ ಸಮಾಜದಲ್ಲಿ ಸಂಭಾವಿತರೆನಿಸಿಕೊಂಡು ಮುನ್ನಡೆದಿರುವುದು ಪ್ರಶಂಸನೀಯವಾದುದಾಗಿದೆ.

ಬಸವಾದಿ ಪ್ರಮಥರು ಹಾಗೂ ಶ್ರಿ ಸಿದ್ಧಗಂಗಾ ಗುರು ಪರಂಪರೆ ಶ್ರೀಯುತ ಲಿಂಗಪ್ಪನವರ ಮಕ್ಕಳಿಗೆ ಸಕಲ ಸನ್ಮಂಗಳವನ್ನುಂಟು ಮಾಡಲಿ ಎಂದು ಹಾರೈಸುತ್ತೇವೆ.



ಶ್ರೀಮತಿ ತಾಯಮ್ಮನವರು

ಶ್ರೀಸಿದ್ಧಗಂಗಾ ಸುಕ್ಷೇತ್ರದಲ್ಲಿ ನಡೆಯುತ್ತಿರುವ ಅತ್ಯಪೂರ್ವ 'ಮಹಾದಾಸೋಹ' ಪರಂಪರೆಗೆ ಬಸವಾದಿ ಶರಣರು ಆಚರಿಸಿ ತೋರಿಸಿದ ಸದ್ಭಾವದ ಸುಸಂಸ್ಕೃತ ಸಂಪ್ರದಾಯವೇ ಸತ್ಪ್ರೇರಣೆಯಾಗಿರುವುದನ್ನು ಗಮನಿಸಿದ ಹೃದಯವಂತ ಉದಾರಮನದ ಭಕ್ತಾದಿಗಳು ಭಕ್ತಿ ಕಾಣಿಕೆಯನ್ನು ಸಮರ್ಪಿಸುತ್ತಿರುವುದು ಪುಣ್ಯ ವಿಶೇಷವೇ ಆಗಿದೆ. ಈ ಶಿವಪಥಕ್ಕೆ ಕಾರಣಪುರುಷರಾದ ಶ್ರೀ। ಮ। ನಿ। ಪ್ರ ಸ್ವ ಡಾ॥ ಶ್ರೀ ಶ್ರೀ ಶಿವಕುಮಾರಮಹಾಸ್ವಾಮಿಗಳವರಲ್ಲಿ ಅನನ್ಯ ಭಕ್ತಿ ಶ್ರದ್ಧೆಯುಳ್ಳ ಅಪಾರ ಸಂಖ್ಯೆಯ ಭಕ್ತಾಧಿಗಳು ಶ್ರೀಗುರುಚರಣಗಳಲ್ಲಿ ತ್ರಿಕರಣ ಶುದ್ಧಿಯಿಂದ ಕಾಣಿಕೀಯನ್ನು ಸಮರ್ಪಿಸಿ ಧನ್ಯಭಾವ ತೃಪ್ತರಾಗುತ್ತಿರುವುದು ಅನುಕರಣೀಯ ವಾದುದಾಗಿದೆ.

ಗುರು ತೋರಿದ ಸೇವಾಪಥದಲ್ಲಿ ಶ್ರೀಮತಿ ತಾಯಮ್ಮ ಮತ್ತು ಮಕ್ಕಳು ಒಂದು ಲಕ್ಷದ ಮೋಲೊಂದು ರೂಗಳನ್ನು 'ಮಹಾದಾಸೋಹ' ನಿಧಿಗೆ ಸಮರ್ಪಿಸಿ ಕೃತಾರ್ಥರಾಗಿದ್ದಾರೆ.

ಬಸವಾದಿ ಪ್ರಮಥರು ಹಾಗೂ ಶ್ರಿ ಸಿದ್ಧಗಂಗಾ ಗುರು ಪರಂಪರೆ ಶ್ರೀಮತಿ ತಾಯಮ್ಮನವರ ಮಕ್ಕಳಿಗೆ ಸಕಲ ಸನ್ಮಂಗಳವನ್ನುಂಟು ಮಾಡಲಿ ಎಂದು ಹಾರೈಸುತ್ತೇವೆ.

## ವಚನಗಳು

ತಡಿ, ತಳವಿಲ್ಲದ ಮಹಾನದಿಯಲ್ಲಿ  
ಒಡಲಿಲ್ಲದ ಅಂಬಿಗ ಬಂದಿದ್ದೇನೆ  
ಹಿಡಿವ – ಬಿಡುವ ಮನವ ಬೆಲೆಗೊಟ್ಟೊಡೆ  
ನಡುವಿಲ್ಲದ ನಿಸ್ಸೀಮ ಗ್ರಾಮದಲ್ಲಿರಿಸುವೆ  
ನೆಂದಾತ ಅಂಬಿಗರ ಚೌಡಯ್ಯ

– ಅಂಬಿಗರ ಚೌಡಯ್ಯ

# ಕಾಯಿಲೆಗೆ ಮೂಲ ಕಾರಣ

-ಮುಂದುವರೆದುದು

## ಏಕಂ ರೋಗಂ ಜನಾಃ ಬಹುಧಾ ವದಂತಿ – ಕ್ರಿಮಿಯ ಕಥೆ

-ಜಿ.ವಿ.ವಿ. ಶಾಸ್ತ್ರಿ
'ನಿಸರ್ಗ ಯೋಗಧಾಮ' ನಂ. ೨/೨೦೪೯, ೧೧ನೇ ಕ್ರಾಸ್,
ಎಸ್.ಎಸ್.ಪುರಂ, ತುಮಕೂರು -೫೭೨ ೧೦೨. ದೂರವಾಣಿ : (೦೮೧೬) ೨೨೭೪೯

**ಕ್ರಿಮಿಯ ಕತೆ :**

ಕ್ರಿಮಿಯಿಲ್ಲದೆ ಕಾಯಿಲೆಯ ಕತೆ ಪೂರ್ಣವಾಗುವುದಿಲ್ಲ. ರೋಗದ ಬಗ್ಗೆ ಭಯ ಬೀಳಲು ಈ ಕ್ರಿಮಿಯೂ ಒಂದು ಕಾರಣ. ಆದ್ದರಿಂದ ಅದರ ಬಗ್ಗೆ ತಿಳಿಯದೆ ಭಯ ದೂರ ವಾಗುವುದೇ ಇಲ್ಲ.

ಕ್ರಿಮಿಯ ಬಗ್ಗೆ ನಮ್ಮನ್ನು ಮೊದಲು ಎಚ್ಚರಿಸಿದವರು ಲೂಯಿ ಪಾಶ್ಚರ್. ಅವರ ಪ್ರಕಾರ ಮನುಷ್ಯನ ಶರೀರ ವೆನ್ನುವುದು ಒಂದು ಬೀರಿನ ಬ್ಯಾರಲ್ಲಿನಂತೆ. ಹೊರಗಿನ ಕ್ರಿಮಿಗಳು ಯಾವಾಗೆಂದರೆ ಆವಾಗ ಅದನ್ನು ಪ್ರವೇಶಿಸಿ ತಮ್ಮ ಸಂತಾನವನ್ನು ಬೆಳೆಸಿಕೊಂಡು ಶರೀರವನ್ನು ಪೂರ್ಣ ನಾಶ ಮಾಡಬಹುದು. ಇದು ನಿಜವೇ? ಕೊಂಚ ಚಿಂತಿಸೋಣ. ಒಂದು ಗಂಟೆಗೆ ಕ್ಷಯ, ಗಂಟಲುಮಾರಿ (Diptheria) ಕಾಲರಾ, ಟೈಫಾಯ್ಡ್ ಇತ್ಯಾದಿಗಳ 14,000 ವಿವಿಧ ಮಿಣಿ ಜೀವಿಗಳು (Microbes) ಆಹಾರ, ನೀರು, ಗಾಳಿಯ ಮುಖಾಂತರ ನಮ್ಮ ಶರೀರವನ್ನು ಪ್ರವೇಶಿಸುತ್ತವೆ. ಒಂದು ಬ್ಯಾಕ್ಟೀರಿಯಾ ಎರಡಾಗಲು ಇಪ್ಪತ್ತು ನಿಮಿಷ ಸಾಕು. ಎಂಟು ಗಂಟೆಗಳಲ್ಲಿ ಒಂದು ಬ್ಯಾಕ್ಟೀರಿಯಾ 16 ದಶಲಕ್ಷ ಬ್ಯಾಕ್ಟೀರಿಯಾ ಆಗಿ ಬೆಳೆಯುತ್ತವೆ. ಇಪ್ಪತ್ನಾಲ್ಕು ಗಂಟೆಗಳಲ್ಲಿ 5 ಬಿಲಿಯನ್ (5ದಶಲಕ್ಷ)ಗಳಾಗಬಲ್ಲದು! ಪ್ರಪಂಚದ ಎಲ್ಲಾ ಮನುಷ್ಯರನ್ನೂ ಕೊಲ್ಲಲು ಇಷ್ಟು ಸಾಕು! ಒಂದು ಬ್ಯಾಕ್ಟೀರಿಯಾ ಬೆಳೆದು ಒಂದು ದಿನದಲ್ಲಿ ಪ್ರಪಂಚವನ್ನೆಲ್ಲಾ ನಾಶಮಾಡಬಲ್ಲದು! ಅಂತಹುದರಲ್ಲಿ ಪ್ರತಿ ಗಂಟೆಗೆ 14,000 ವಿವಿಧ ಬ್ಯಾಕ್ಟೀರಿಯ ಗಳು ಪ್ರತಿಯೊಬ್ಬನ ಶರೀರವನ್ನೂ ಪ್ರವೇಶಿಸಿದರೆ ಮನುಷ್ಯನ ಗತಿ ಏನು? ಆದರೆ, ನಾವಿನ್ನೂ ಬದುಕಿಯೇ ಇದ್ದೇವಲ್ಲ! ಬ್ಯಾಕ್ಟೀರಿಯಾಗಳಿಗೆ ಹೆದರಿ ಬಾಳೆಹಣ್ಣನ್ನು ಸಹ ಬಿಸಿನೀರಲ್ಲಿ ಅದ್ದಿ ತಿನ್ನುತ್ತಿದ್ದರು ಪ್ಯಾಶ್ಚರ್ ಮಹಾಶಯರು! ಒಮ್ಮೆ ದ್ರಾಕ್ಷಿ ತೊಳೆದ ನೀರನ್ನು ಆಕಸ್ಮಿಕವಾಗಿ ಕುಡಿದುಬಿಟ್ಟರು. ಆಗ ಊಹಿಸಿಕೊಳ್ಳಿ ಅವರ ಹಾರಾಟ! ದೇವರ ದಯದಿಂದ ಆಕಾಶವೇನೂ ಬೀಳಲಿಲ್ಲ! ಅವರ ವಿಚಾರ ಸರಣಿಯೇ ಸರಿ ಇದ್ದಲ್ಲಿ ಮನುಷ್ಯನ ಸಂಖ್ಯೆಗಿಂತ ಅನೇಕ ಪಟ್ಟು ಹೆಚ್ಚಿರುವ ಬ್ಯಾಕ್ಟೀರಿಯಾಗಳಿಂದ ಈ ಮನುಜಕುಲ ಎಂದೋ ನಾಮಾ ವಶೇಷವಾಗಬೇಕಿತ್ತು. ಮನುಷ್ಯನಿನ್ನೂ ಉಳಿದಿರುವುದೇ ಅವರ ತಪ್ಪು ಲೆಕ್ಕಾಚಾರಕ್ಕೆ ಸಾಕ್ಷಿ. ಇವರ ಸಿದ್ಧಾಂತಕ್ಕೆ ಕೊಂಚ ಹೂರಣ ತುಂಬಿ ಪ್ರೊ॥ ಮಿಟ್ನಿಕಾಫ್, ಡಾ॥ ಬುಲೋಚ್ ಮುಂತಾದವರು, ಶರೀರದ ನೈಸರ್ಗಿಕ ಪ್ರತಿರೋಧದ ಸಿದ್ಧಾಂತವನ್ನು ತಂದರು. ಅವರ ಪ್ರಕಾರ ಕ್ರಿಮಿಗಳು ಮನುಷ್ಯನ ಶರೀರವನ್ನು ಪ್ರವೇಶಿಸಿದ ಕೂಡಲೇ ಬಿಳಿಯ ರಕ್ತ ಕಣಗಳು ಯುದ್ಧಕ್ಕೆ ಸಿದ್ಧವಾಗಿರುವಂತೆ ಸೈನಿಕರಂತೆ ಅವುಗಳ ಮೇಲೆ ಧಾಳಿ ಮಾಡುವುವು. ಇಬ್ಬರಿಗೂ ಘೋರ ಯುದ್ಧ. ಬಹಳಷ್ಟು ಸಲ ಬಿಳಿಯ ರಕ್ತಕಣಗಳ ಸೋಲು. ಕಾರಣ, ಅದಕ್ಕೆ ನಿಸರ್ಗ ಶಕ್ತಿಯುತವಾದ ಆಯುಧವನ್ನು ಒದಗಿಸಿಲ್ಲ. ಅದಕ್ಕಾಗಿ ಮನುಷ್ಯನು ಅಂಟಿಬಯೋಟಿಕ್ ಎಂಬ ಸಾಧನ ವನ್ನು ಅವುಗಳ ಸಹಾಯಕ್ಕೆ ಕಳುಹಿಸುವುದನ್ನು ಕಲಿತ. ಇವುಗಳು ನುಗ್ಗಿದ ಮೇಲೆ ಯುದ್ಧಕ್ಕೆ ಒಂದು ಕಳೆ ಬಂತು. ಮಹಾಭಾರತದಲ್ಲಿಯೇ ಹೇಳಿಲ್ಲವೇ, 'ಯುದ್ದಸ್ಯ ಚ ಕಥಾ ರಮ್ಯ'– ಯುದ್ಧದ ಕತೆ ರಮ್ಯವಾಗಿರುತ್ತದೆ.

ಏನು? ಇವೆಲ್ಲಾ ಕಟ್ಟುಕತೆಗಳೇ? ಇದು ನನ್ನ ಕತೆಯಲ್ಲ. ಅದು ಡಾ॥ ಪವೆಲ್ಲರ ವಾದ. ಅವರ ಪ್ರಕಾರ, ಸತ್ತ ಜೀವಕೋಶ ಗಳು, ಬ್ಯಾಕ್ಟೀರಿಯಾಗಳು, ಕ್ರಿಮಿಗಳು ಇವುಗಳೆಲ್ಲವೂ ಸೇರಿ ಆಗುವ ಕೀವನ್ನು ಬಿಳಿಯ ರಕ್ತಕಣಗಳೆಂದು ತಪ್ಪಾಗಿ ತಿಳಿಯ ಲಾಗಿದೆಯೇ ವಿನಃ ಬಿಳಿಯ ರಕ್ತ ಕಣಗಳೇ ಇಲ್ಲ. ಶರೀರಕ್ಕೆ ಬೇಡದ ಯಾವುದೇ ಅನ್ಯ ಪದಾರ್ಥ ಶರೀರವನ್ನು ಪ್ರವೇಶಿ ಸಿದರೂ ಅದನ್ನು ಹೊರಕ್ಕೆ ಹಾಕುವ ವ್ಯವಸ್ಥೆ ಇದ್ದೇ ಇದೆ. ಕ್ರಿಮಿಗಳಿಗೋಸ್ಕರ ಕಾದು ಕುಳಿತಿರುವ ಪ್ರತ್ಯೇಕ ವ್ಯವಸ್ಥೆ ಇಲ್ಲ.

1. ಈ ವಾದವನ್ನು ಪಕ್ಕಕ್ಕಿಟ್ಟು ನಮ್ಮ ಮೊದಲಿನ ವಿಚಾರಕ್ಕೆ ಬರೋಣ. ಕ್ರಿಮಿಗಳು ಹೊರಗಿನಿಂದ ಒಳಕ್ಕೆ ಬರುತ್ತವೆ ಎನ್ನುವ ವಿಚಾರ.

ಒಮ್ಮೆ ಒಂದು ಸಪೋಟಾ ಹಣ್ಣನ್ನು ಡಬ್ಬದಲ್ಲಿಟ್ಟು ಮರೆತುಬಿಟ್ಟೆ, ಮುಚ್ಚಳ ಮುಚ್ಚಿಟ್ಟು ಅನೇಕ ದಿನಗಳ ನಂತರ ಮುಚ್ಚಳ ತೆಗೆದು ನೋಡಿದೆ. ಹಣ್ಣು ಕೊಳೆತುಹೋಗಿದೆ. ಅದರಲ್ಲಿ ಹುಳುಗಳು. ಅವು ಎಲ್ಲಿಂದ ಬಂದವು? ಮೊಸರನ್ನು ಮುಚ್ಚಿಟ್ಟು ಮರುದಿನ ಊರಿಗೆ ಹೋದಳು ಗೃಹಿಣಿ. ಕೆಲದಿನಗಳ ನಂತರ ಊರಿನಿಂದ ಬಂದ ಮೇಲೆ ನೋಡಿದರೆ ಹುಳುಗಳು. ಅವು ಎಲ್ಲಿಂದ ಬಂದವು? ಬಾಗಿಲು ಕಿಟಕಿಗಳನ್ನು ಮುಚ್ಚಿರುವ ಒಂದು ರೂಮಿನಲ್ಲಿ ಒಂದು ಇಲಿ ಸತ್ತು ಬಿದ್ದಿತ್ತು. ಕೊಂಚ ದಿನಗಳ ನಂತರ ಅದರಲ್ಲಿ ಹುಳುಗಳು. ಅವು ಬಂದಿದ್ದಾದರೂ ಎಲ್ಲಿಂದ?

ಲೂಹಿಪಾಶ್ಚರನ ಸಮಕಾಲೀನನಾದ ಪ್ರೊ॥ ಬೆಚ್ಯಾಂಪ್ (Prof . Bechamp) ಎಂಬ ಫ್ರೆಂಚ್ ವಿಜ್ಞಾನಿಯ ಪ್ರಕಾರ ಜೀವಕೋಶಗಳು ಇನ್ನೂ ಸೂಕ್ಷ್ಮವಾದ ಮೈಕ್ರೋಜೈಮಾ (Microzyma) ಎಂಬ ಮೂಲಭೂತ ಕಣಗಳಿಂದ







ಮಾಡಲ್ಪಟ್ಟಿದೆ. ಇವು ಜೀವಸೃಷ್ಟಿಯ ಮೂಲಕಣಗಳು. ಇವಕ್ಕೆ ಹುದುಗುವಿಕೆಯ ಅಥವಾ ಹುಳಿಯುವ ಗುಣವಿದೆ. ಪರಿಶುದ್ಧ ವಾದ ಅಂದರೆ ಶುದ್ಧ ಗಾಳಿ, ಬೆಳಕು ಇರುವಲ್ಲಿ ಇವುಗಳು ಆರೋಗ್ಯಕರವಾದ ಶರೀರದ ಜೀವಕೋಶಗಳಾಗಿ ಬೆಳೆಯುತ್ತವೆ. ಕೊಳೆಯಿಂದ ಕೂಡಿದ ವಾತಾವರಣದಲ್ಲಿ, ಗಾಳಿ, ಬೆಳಕುಗಳಿಲ್ಲದ ಜಾಗದಲ್ಲಿ ಇವೇ ಕ್ರಿಮಿಗಳಾಗಿ, ಬ್ಯಾಕ್ಟೀರಿಯಾ ಗಳಾಗಿ, ವೈರಸ್ಸುಗಳಾಗಿ ಮಾರ್ಪಡುತ್ತವೆ. ಕಾರಣ? ಜೀವ ಕೋಶದಲ್ಲಿ ಕೊಳೆಯು ಸೇರಿತು. ನಿಸರ್ಗ ಶುದ್ಧಿಮಾಡುವ ಪ್ರಕ್ರಿಯೆಯೆನ್ನು ಪ್ರಾರಂಭಿಸಬೇಕು. ಆ ಕೊಳೆಯನ್ನು ಹೇಗೆ ನಾಶ ಮಾಡುವುದು? ಅದಕ್ಕಾಗಿ ಒಂದು ಜೀವಿಯನ್ನು ಸೃಷ್ಟಿಸಿ ತಿಂದು ಮುಗಿಸುವಂತೆ ಮಾಡುವುದು. ಇದು ನಿಸರ್ಗದ ಹಂಚಿಕೆ. **ಕ್ರಿಮಿಗಳ ಆಹಾರ ಕೊಳೆ. ಕೊಳೆಯಿರುವಲ್ಲಿ ಅವುಗಳ ಸೃಷ್ಟಿ.** ಆರೋಗ್ಯಕರವಾಗಿದ್ದ ಜೀವಕೋಶಗಳೇ ಕ್ರಿಮಿಗಳಾಗಿ ಪರಿವರ್ತನೆ. ಕೊಳೆಯಲ್ಲ ವನ್ನೂ ತಿಂದಾದ ನಂತರ ಆ ಹುಳುಗಳಿಗೆ ಕೆಲಸವೇನು. ಈಗ ಅವುಗಳಿಗೆ ಆಹಾರವೆಲ್ಲಿ? ಆಹಾರದ ಕೊರತೆಯಿಂದ ತಮ್ಮನ್ನು ತಾವೇ ತಿಂದು ಕೆಲವು ದಿನ ಬದುಕು. ಕಡೆಗೆ ಮೂಲಾ ಮೈಕ್ರೋಜೈಮಾ ಆಗಿ ಪರಿವರ್ತನೆ. ಈಗ ಒಳ್ಳೆಯ ವಾತಾವರಣ ಸಿಕ್ಕಿದರೆ ಆರೋಗ್ಯಕರ ಜೀವಕೋಶ. ಮತ್ತೆ ಕೊಳೆಯ ವಾತಾವರಣವೇ ಆದರೆ ಮತ್ತೆ ಕ್ರಿಮಿ. ಅಂದರೆ ಕ್ರಿಮಿಯು ಆಹಾರ ಸರಪಣಿಯ ಒಂದು ಸೃಷ್ಟಿ ಹೊರಗಿನಿಂದ ಹಾರಿಬಂದದ್ದಲ್ಲ.

**ಬ್ಯಾಕ್ಟೀರಿಯಾ ಮತ್ತು ಬೆಚ್ಯಾಂಪ್ :** ಬೆಚ್ಯಾಂಪ್ ಬೀಸಿನ ಯೀಸ್ಟನ್ನು (Yeast) ಸಕ್ಕರೆಯ ದ್ರಾವಣದಲ್ಲಿ ಬೆಳೆಸಿದನು. ಅದು ಬೆಳೆಯುತ್ತಲೇ ಇತ್ತು. ಅದಕ್ಕೆ ಕ್ರಿಮಿನಾಶಕವನ್ನು ಹಾಕಿದಾಗ ಅದರ ಬೆಳವಣಿಗೆ ನಿಂತಿತು. ನಂತರ ಕೊಳೆಯು ವಿಕೆಯು ಪ್ರಾರಂಭವಾಯಿತು. ಕೆಲವು ದಿನಗಳಲ್ಲಿ ಅದರಲ್ಲಿ ಹುಳುಗಳ ಉತ್ಪತ್ತಿ. ಹೊರಗಿನಿಂದ ಬ್ಯಾಕ್ಟೀರಿಯಾಗಳು ಪ್ರವೇಶಿಸದಂತೆ ತಡೆದ ವಾತಾವರಣದಲ್ಲಿ ಈ ಪ್ರಯೋಗವನ್ನು ನಡೆಸಲಾಗಿತ್ತು. ಕೊಳೆಯಲ್ಲಾ ಕಳೆದ ಮೇಲೆ ಮೂಲ ಮೈಕ್ರೋಜೈಮಾ ಆಗಿಯೇ ಉಳಿಯಿತು. ಇದರಿಂದ ಅವನ ಸಿದ್ಧಾಂತವನ್ನು ಪ್ರತಿಪಾದಿಸಿದ. ನಮ್ಮ ರಕ್ತ, ಹಾಲು ಎಲ್ಲವೂ ಹುದುಗುವಿಕೆಯ ಗುಣವುಳ್ಳ ಮೈಕ್ರೋಜೈಮಾದಿಂದ ತಯಾ ರಾಗಿರುವುದರಿಂದ ವಾತಾವರಣ ಕೆಟ್ಟು ಕೊಳೆ ಸೇರಿದರೆ ಹುಳುಗಳ ಉತ್ಪತ್ತಿ ತಾನೇ ತಾನಾಗಿ ಆಗುತ್ತದೆ.

ಈಗ ಅರ್ಥವಾಗಿರಬಹುದಲ್ಲವೇ? ಸಪೋಟ ಹಣ್ಣಿನಲ್ಲಿ, ಮೊಸರಿನಲ್ಲಿ, ಸತ್ತ ಇಲಿಯಲ್ಲಿ ಹುಳುಗಳು ಹೇಗೆ ಬಂದುವೆಂದು?

ಅಣುವಿಗೆ ಎಲೆಕ್ಟ್ರಾನಿನಂತೆ ಜೀವಕೋಶಗಳಿಗೆ ಮೈಕ್ರೋಜೈಮಾ, ಎಲೆಕ್ಟ್ರಾನಿನ ಸಂಖ್ಯೆಯ ವ್ಯತ್ಯಾಸದಿಂದ ವಿವಿಧ ಮೂಲವಸ್ತುಗಳ ಹುಟ್ಟುವಿಕೆ. ಇಲ್ಲಿ ವಿವಿಧ ಕೊಳೆಯ ಸನ್ನಿವೇಶದಂತೆ ವಿವಿಧ ಕ್ರಿಮಿಗಳ ಹುಟ್ಟುವಿಕೆ. ಕ್ರಿಮಿಗಳ ನಾನಾ ರೂಪವೇ ಬ್ಯಾಕ್ಟೀರಿಯಾ, ವೈರಸ್ ಇತ್ಯಾದಿ.

ರೋಗಕ್ಕೆ ಕಾರಣ– ಕ್ರಿಮಿಗಳು. ಇದು ಸಾಧಾರಣವಾಗಿ ನಾವು ನಂಬಿರುವ ಸಿದ್ಧಾಂತ. ಮೋಡದ ವಾತಾವರಣ. ಚಿಟಿ–ಚಿಟಿ ಮಳೆ. ಮನೆಮಂದಿಗೆಲ್ಲಾ ನೆಗಡಿಯ ಆಗಮನ ಯಾರೋ ಒಬ್ಬರಿಗೆ ನೆಗಡಿ ಆಗಲೇ ಇಲ್ಲ ಏಕೆ? ಮಾವಿನ ಹಣ್ಣಿನ ಬುಟ್ಟಿಯಲ್ಲಿ, ಒಂದು ಮಾವಿನ ಹಣ್ಣಿನಲ್ಲಿ ಮಾತ್ರ ಹುಳು. ಇತರ ಹಣ್ಣುಗಳು ಆರೋಗ್ಯವಾಗಿವೆ.

'ರೋಗನಿದಾನವು ಬದಲಾಗುತ್ತಿದೆ. ಆ ವಿಷಯದಲ್ಲಿ ನಾವಿನ್ನೂ ಕೊನೆಯನ್ನು ಮುಟ್ಟಿಲ್ಲ. ಬ್ಯಾಕ್ಟೀರಿಯಾಗಳು ರೋಗಕಾರಣಗಳಲ್ಲ, ರೋಗಪರಿಣಾಮಗಳು' –ಸರ್ ಜೇಮ್ಸ್ ಗುಡ್‌ಹಾರ್ಟ್.

'ಸುಮಾರು ಇಪ್ಪತ್ತು ವರ್ಷಗಳ ಹಿಂದೆ ಕೀಟಾಣು ಗಳೆಂಬ ಬೀಜಗಳಿದ್ದರೆ ರೋಗಗಳೆಂಬ ವೃಕ್ಷಗಳು ಹುಟ್ಟಲೇ ಬೇಕು ಎಂದು ನಂಬಿದ್ದರು. ಆದರೆ ಈ ವೈದ್ಯಶಾಸ್ತ್ರಕ್ಕೆ, ಬೀಜದಷ್ಟೇ ಭೂಮಿಯ ಗುಣಾವಗುಣಗಳನ್ನು ನಿರ್ಣಯಿ ಸುವುದೆಂದು ಮನವರಿಕೆಯಾಗಿದೆ.– ಲಂಡನ್ ಟೈಮ್ಸ್.

'ಕಾಯಿಲೆಗೆ ಎರಡು ಮುಖಗಳಿವೆ. ಒಂದು ಕಾಯಿಲೆಯ ಕಾರಣ(Seed) ಮತ್ತೊಂದು ಆ ಕಾರಣವನ್ನು ಎತ್ತಿ ಹಿಡಿದು ಅದಕ್ಕೆ ಬೇಕಾದ ಪೌಷ್ಟಿಕ ಆಹಾರವನ್ನು ಕೊಟ್ಟು ಬೆಳೆಸುವ ಮಣ್ಣು (soil) ಅಂದರೆ ರೋಗನಿರೋಧಕ ಶಕ್ತಿ ಇಲ್ಲದಿರುವುದು. ಹೆಚ್ಚಿನ ಕಾಯಿಲೆಗಳು ಮಣ್ಣಿನ ದೋಷದಿಂದ ಬರುವುದೇ ವಿನಃ ಬೀಜದಿಂದಲ್ಲ. ಒಂದೆರಡು ಉದಾಹರಣೆಗಳು ವಿಷಯವನ್ನು ಸರಿಯಾಗಿ ತಿಳಿಸಬಹುದು. ಸಾಮಾನ್ಯ ನೆಗಡಿಯನ್ನು ಉದಾಹರಣೆಯಾಗಿ ತೆಗೆದು ಕೊಳ್ಳುವ. ಈ ನೆಗಡಿಯನ್ನು ಬರಿಸುವ ರೋಗಾಣು (Rhino Virus) ಸದಾ ನಮ್ಮ ಮೂಗು ಅಥವಾ ಗಂಟಲಿನಲ್ಲಿರುವುದು ಸ್ವಾಭಾವಿಕ. ಇವುಗಳ ಇರುವಿಕೆ ನಮ್ಮ ಆರೋಗ್ಯಕ್ಕೆ ಅಗತ್ಯ. ಈ ಸೂಕ್ಷ್ಮಾಣುಗಳು ನಮ್ಮ ದೇಹದ ಕೊರತೆಗಳನ್ನು (D.N.A. damage) ಸರಿಪಡಿಸಿ ನಾವು ಸುಖಜೀವನ ಮಾಡುವಲ್ಲಿ ಸಹಾಯ ಮಾಡುವುವು (symbiosis). ಆದರೆ, ನಮ್ಮ ದೇಹದ ಮಣ್ಣು (soil) ಅದರ ಸತ್ವವನ್ನು ಕಡಿಮೆ ಮಾಡಿದಾಗ ಇದೇ ಸೂಕ್ಷ್ಮಾಣು ಮೂಗಿನ ಒಳಗಿನ ಕಣಗಳನ್ನು ಹೊಕ್ಕು ಅವುಗಳನ್ನು ಕೊಂದು ಹಾಕಿ ನೆಗಡಿಯ ಲಕ್ಷಣವನ್ನು ಬರಿಸುವುವು". ಡಾ॥ ಬಿ.ಎಮ್. ಹೆಗ್ಡೆ – ಜನವಾಹಿನಿ, ಡಿಸೆಂಬರ್ 23, 1999.

ಹೀಗೆ ಆಧುನಿಕ ವೈದ್ಯವಿಜ್ಞಾನವೂ ಸಹ ಕೀಟಾಣುವೇ ರೋಗಕ್ಕೆ ಕಾರಣವೆಂಬ ಹಳೆಯ ತತ್ವವನ್ನು ಸಡಿಲಗೊಳಿಸಿದೆ.

**ರೋಗನಿರೋಧಕ ಶಕ್ತಿ :**

ಹಾಗಾದರೆ ಕ್ರಿಮಿಗಳು ರೋಗವನ್ನು ತರುವುದೇ ಇಲ್ಲವೇ? ಡಾ॥ ಪೆಟಿನ್ ಕಾಫರ್ (Pettin Koffer) ವಿಯನ್ನಾ ವಿಶ್ವವಿದ್ಯಾಲಯದ ಪ್ರೊಫೆಸರ್‌ರವರು, ಒಂದು

ಲೋಟ ಕಾಲರಾ ಕ್ರಿಮಿಯನ್ನು ಕುಡಿದರು. ಇದರಿಂದ ಅವರಿಗೆ ವಾಕರಿಕೆ ಬಂತೇ ವಿನಃ ಕಾಲರಾ ಬರಲಿಲ್ಲ.

ಡಾ॥ ರುಡರ್ ಮಂಡ್ (Dr.Rudermund) ತಮ್ಮ ಶರೀರಕ್ಕೆ ಸಿಡುಬಿನ ಬ್ಯಾಕ್ಟೀರಿಯಾವನ್ನು ಹಚ್ಚಿಕೊಂಡರು. ಆದರೆ ಸಿಡುಬು ಬರಲಿಲ್ಲ.

ಡಾ॥ ಜಾನ್ ಫ್ರೆಜರ್‌ರವರು 1917ರಲ್ಲಿ ಡಿಫ್ತೀರಿಯಾ, ಟೈಫಾಯಿಡ್, ನಿಮೋನಿಯಾ, ಮುಂತಾದುವುಗಳ ರೋಗಾಣುಗಳನ್ನು ಲಕ್ಷಾವಧಿ ಸಂಖ್ಯೆಯಲ್ಲಿ ನೀರು, ಹಾಲು, ರೊಟ್ಟಿ ಮುಂತಾದ ಪದಾರ್ಥಗಳೊಂದಿಗೆ ನುಂಗಿ ಯಾವುದೇ ಕಾಯಿಲೆಯೂ ಬಾರದೆ ಉಳಿದರು.

"ಕೊನೆಯ ಸತ್ಯ...... ನಮ್ಮ ರೋಗನಿರೋಧಕಶಕ್ತಿಯೇ ನಮ್ಮನ್ನು ಕೊಲ್ಲುವುದು ಅಥವಾ ಬದುಕಿಸುವುದು" – ಡಾ॥ ಬಿ.ಎಂ. ಹೆಗ್ಡೆ, ತರಂಗ, 20 ಏಪ್ರಿಲ್, 1997.

ರೋಗ ನಿರೋಧಕ ಶಕ್ತಿ ಎಂದು ಇಲ್ಲಿ ಹೇಳಿರುವುದೆಲ್ಲಾ ನಾವು ಹಿಂದೆ ವಿವರಿಸಿದ 'ಜೀವಶಕ್ತಿ'ಯ ಇನ್ನೊಂದು ಮುಖವೇ ಆಗಿದೆ. ಒಂದು ಮುಖದಿಂದ ಕೊಳೆಯ ಸಂಗ್ರಹವಾಗದಂತೆ ನೋಡಿಕೊಂಡರೆ ಇನ್ನೊಂದು ಮುಖದಿಂದ ಕೊಳೆಯು ಹೊರಗೆ ಹೋಗಲು ಸಹಕರಿಸುತ್ತದೆ. ಮೇಲಿನ ಪ್ರಯೋಗಗಳೆಲ್ಲಾ ಅದಕ್ಕೆ ಉದಾಹರಣೆಗಳಷ್ಟೆ.

**ಕೆಲವು ಪ್ರಶ್ನೆಗಳು :**

ಪ್ರಶ್ನೆ: ಹಾಗಾದರೆ ಕಾಯಿಲೆಗೂ ಕ್ರಿಮಿಗೂ ಸಂಬಂಧವೇ ಇಲ್ಲವೇ?

ಇದೆ. ಹಿಂದೆ ಹೇಳಿದಂತೆ ಕ್ರಿಮಿ, ಪರಿಣಾಮವೇ ವಿನಃ ಕಾರಣವಲ್ಲ. ಒಂದು ವೇಳೆ ಕಾರಣವೆಂದು ಭಾವಿಸುವುದಾದರೂ ಅದು ಎರಡನೆಯ ಕಾರಣ. ಮೊದಲ ಕಾರಣ ಮಲಸಂಗ್ರಹಣೆ. ಎಲ್ಲಿ ಮಲವಿದೆಯೋ ಅಲ್ಲಿ ಕ್ರಿಮಿ ಬರುತ್ತದೆ. ಅದು ರೋಗವು ಹೆಚ್ಚಲು ಕಾರಣವಾಗುತ್ತದೆ. ಆರೋಗ್ಯಕರ ವಾತಾವರಣದಲ್ಲಿ ಮಲಕ್ಕೇ ಆಗಲಿ ಕ್ರಿಮಿಗೇ ಆಗಲಿ ಜಾಗವಿಲ್ಲ.

ಪ್ರಶ್ನೆ : ಕ್ರಿಮಿಗಳು ಶರೀರದ ಒಳಗೇ ಸೃಷ್ಟಿಯಾಗುವುದಾದರೆ ಹೊರಗೆ ಅವು ಬರುವುದೇ ಇಲ್ಲವೇ? ಅಥವಾ ಹೊರಗಿನ ವಾತಾವರಣದಿಂದ ಅವು ಹರಡುವುದೇ ಇಲ್ಲವೇ?

ಕೊಳೆಯಿರುವ ಶರೀರದಲ್ಲಿ ಒಳಗೇ ಸೃಷ್ಟಿಯಾಗುತ್ತವೆ. ಹೀಗೆ ಸೃಷ್ಟಿಯಾದ ಕ್ರಿಮಿಗಳು ವಾತಾವರಣಕ್ಕೂ ಹರಡುತ್ತವೆ. ಇವುಗಳೂ ಸಹ ಕೊಳೆಯಿರುವ ಮತ್ತೊಂದು ಶರೀರವನ್ನು ಸೇರಿ ಅಲ್ಲಿ ಸಾಕಷ್ಟು ತೊಂದರೆ ಕೊಡಬಹುದು. ಆದರೆ ಆರೋಗ್ಯಕರ ಶರೀರದಲ್ಲಿ ಇವುಗಳ ಆಟವೇನೂ ನಡೆಯುವುದಿಲ್ಲ.

ಪ್ರಶ್ನೆ : ಕ್ರಿಮಿಗಳು ಕಾಯಿಲೆಗೆ ಕಾರಣವಲ್ಲದಿದ್ದರೆ ಸಾಂಕ್ರಾಮಿಕ ರೋಗಗಳಿಗೆ ಕಾರಣವೇನು ?

ಒಂದೇ ಕಾಲ, ಒಂದೇ ರೀತಿಯ ಜೀವನ ಪದ್ಧತಿ, ಅಂದರೆ ಒಂದೇ ರೀತಿಯ ಆಹಾರ, ಒಂದೇ ರೀತಿಯ ವ್ಯವಹಾರ, ಚಿಂತನೆ, ಒಂದೇ ರೀತಿಯ ಮನೆಗಳು, ಒಟ್ಟಿನಲ್ಲಿ ಒಂದೇ ರೀತಿಯ ಆಚಾರ, ವಿಚಾರಗಳು. ಆದ್ದರಿಂದ ಒಂದೇ ರೀತಿಯ ಕೊಳೆಯ ಸಂಗ್ರಹ, ಅದರಿಂದ ಒಂದೇ ರೀತಿಯ ಸೂಕ್ಷ್ಮಾಣುಗಳ ಹುಟ್ಟು, ಬೆಳವಣಿಗೆ ಹಾಗೂ ಹರಡುವಿಕೆ. ಇದು ಸಾಂಕ್ರಾಮಿಕಗಳ ಉಗಮ ಹಾಗೂ ಪ್ರಸಾರಕ್ಕೆ ಕಾರಣ. ಈ ಒಂದೇ ಆಚಾರ, ವಿಚಾರ ಆರೋಗ್ಯಕರವಾಗಿದ್ದಲ್ಲಿ ಸಾಂಕ್ರಾಮಿಕಗಳ ಕಾಟವಿಲ್ಲ.

ಕಾಡಿನಲ್ಲಿರುವ ಮರಗಳಲ್ಲಿ ವೈವಿಧ್ಯತೆ ಇರುತ್ತದೆ. ಅದೇ ನಾವೇ ಬೆಳೆಸಿದ ಪೈರು, ಉದಾ: ಒಂದು ಜಲಾಶಯದ ಹಿಂದಿನ ಸಾವಿರಾರು ಎಕರೆ ಬತ್ತದ ಬಯಲು. ಇದಕ್ಕೆ ಒಂದು ಹುಳು ಬಿದ್ದಲ್ಲಿ ಸರ್ವವೂ ನಾಶ. ಆದರೆ ಕಾಡಿನಲ್ಲಿ ಒಂದು ಜಾತಿಯ ಮರಕ್ಕೆ ಕ್ರಿಮಿ ಬಿದ್ದಲ್ಲಿ ಹರಡಲು ಅವಕಾಶವಿಲ್ಲ.

ಈಗ ನಗರಗಳ ಜೀವನವನ್ನು ನೋಡಿ. ಒಂದೇ ಹೊಲಸು ಮಾದರಿ. ಇದು ಸಾಂಕ್ರಾಮಿಕ ರೋಗಗಳಿಗೆ ಹೇಳಿ ಮಾಡಿಸಿದ ವಾತಾವರಣ. ಇಂತಹ ವಾತಾವರಣದಲ್ಲೂ ಸಹ ಕೆಲವು ಜನ ರೋಗದಿಂದ ಮುಕ್ತರು. ಅಂತಹವರಲ್ಲಿ ರೋಗನಿರೋಧಕ ಶಕ್ತಿ ಹೆಚ್ಚಿರುತ್ತದೆ.

ಪ್ರಶ್ನೆ : ನೀವು ಹೇಳುವಂತೆ ಕ್ರಿಮಿಗಳು ಕೊಳೆಯನ್ನು ತಿಂದು ಮಲಸಂಗ್ರಹಣೆಯನ್ನು ಕಡಿಮೆ ಮಾಡುವುದಾದರೆ, ಕೊಳೆಯನ್ನು ಪೂರ್ಣವಾಗಿ ತಿಂದಾದ ಮೇಲೆ ರೋಗ ತನ್ನಷ್ಟಕ್ಕೆ ತಾನೇ ವಾಸಿಯಾಗಬೇಕಲ್ಲವೇ? ಅದಕ್ಕೆ ಕ್ರಿಮಿಗಳನ್ನೇ ನೇಮಿಸಬಹುದಲ್ಲ?

ಕ್ರಿಮಿಗಳು ನಿಸರ್ಗ ನೇಮಿಸಿದ ಜಾಡಮಾಲಿಗಳು ಎಂಬುದು ಸರಿ. ಕೊಳೆಯು ತುಂಬಾ ಹೆಚ್ಚಾದಲ್ಲಿ ಮಾತ್ರ ನಿಸರ್ಗ ಈ ಕೆಲಸವನ್ನು ಮಾಡುತ್ತದೆ. ರಸ್ತೆಯ ತುಂಬಾ ಜಾಡಮಾಲಿಗಳೇ ಆದರೆ ಜನರು ಓಡಾಡುವುದೆಲ್ಲಿ? ಕ್ರಿಮಿಗಳು ಹಾಳಾದ ಅಂಗಗಳನ್ನು ತಿಂದು ಹಾಕಿಬಿಡುತ್ತದೆ. ನಿಧಾನವಾಗಿ ಆರೋಗ್ಯವಾಗಿದ್ದ ಅಂಗಗಳೂ ಸಹ ಹಾಳಾಗಲು ಪ್ರಾರಂಭವಾಗುತ್ತವೆ. ಕ್ರಿಮಿಗಳ ಮುಖಾಂತರ ಕೊಳೆಯ ಸಂಗ್ರಹವನ್ನು ಕಡಿಮೆ ಮಾಡಿಕೊಳ್ಳುತ್ತೇವೆನ್ನುವುದು, ಸಾಲ ಮಾಡಿ ಸಾಹುಕಾರರಾಗುವುದು ಸುಲಭವೆಂದಂತೆ! ಇದು ಋಣಾತ್ಮಕ ಚಿಂತನೆ. ಕೊಳೆಯು ಸಂಗ್ರಹವಾದಂತೆ ನೋಡಿಕೊಳ್ಳುವುದೇ ಉತ್ತಮ ಮಾರ್ಗ. ಕ್ರಿಮಿಗಳಿಗೆ ಈಗ ನಾವುಗಳು ಹೆದರುವಷ್ಟು ಹೆದರಬೇಕಾದ ಅವಶ್ಯಕತೆಯಿಲ್ಲವೆಂದೂ ಅವುಗಳ ಮುಖ್ಯ ಉದ್ದೇಶ ನಮ್ಮನ್ನು ಸಾಯಿಸುವುದಲ್ಲ. ತಮ್ಮ ಆಹಾರ ಹೊಂಚುವೆದೆಂದೂ, ಅವುಗಳಿಗೆ ಆಹಾರವನ್ನು ನಾವು ಒದಗಿಸದಿದ್ದರೆ ಅವು ತಮ್ಮಷ್ಟಕ್ಕೆ ತಾವೇ ಜಾಗವನ್ನು ಖಾಲಿ ಮಾಡುವುದೆಂದೂ ತಿಳಿಸುವುದೇ ಆಗಿದೆಯೇ ವಿನಃ ಸ್ವಚ್ಛತೆಗಾಗಿ ಕ್ರಿಮಿಗಳನ್ನು ನೇಮಿಸಿಕೊಳ್ಳಿರೆಂದು ಹೇಳುವುದಲ್ಲ.

(ಮುಂದುವರಿಯುತ್ತದೆ) *





ಶ್ರೀ ಸಿದ್ಧಲಿಂಗೇಶ್ವರರು ಬೋಳಬಸವಾರ್ಯನಿಗೆ ಬೋಧಿಸಿದ ಷಟ್ಸ್ಥಲೋಪದೇಶ

## ಸಿದ್ಧೇಶ್ವರ ಪುರಾಣ ಭಾಗ–೨೧

–ಮುಂದುವರೆದುದು

– ಕೋ. ರಂ. ಬಸವರಾಜು
ಪ್ರಾಧ್ಯಾಪಕರು, ಸಂಸ್ಕೃತ ಕಾಲೇಜು, ಶ್ರೀ ಸಿದ್ಧಗಂಗಾ ಮಠ –೫೭೨ ೧೦೪.

ನೈರ್ಮಲ್ಯಂ ಮನಸೋ ಲಿಂಗಂ ಪ್ರಸಾದ ಇತಿ ಕರ್ಥ್ಯತೆ ।
ಶಿವಸ್ಯಲಿಂಗ ರೂಪಸ್ಯ ಪ್ರಸಾದಾದೇವ ಸಿದ್ಧ್ಯತಿ ॥

ಲಿಂಗರೂಪಿಯಾದ ಶಿವನ ಪ್ರಸಾದದಿಂದ ಪ್ರಾಪ್ತವಾದ ಮನಸ್ಸಿನ ಪ್ರಸನ್ನತೆಯೇ ಪ್ರಸಾದ. ಅದರಲ್ಲಿ ಚಲಿಸುವವನೇ ಪ್ರಸಾದಿಸ್ಥಲಿ. ಮಾಹೇಶ್ವರನ ನಿಷ್ಠೆಯೇ ಇಲ್ಲಿ ಸಾವಧಾನವಾಗಿ ಪರಿಣಾಮ ಹೊಂದುತ್ತದೆ. ಗುರುಲಿಂಗ ಜಂಗಮರನ್ನು ಏಕೋಭಾವದಿಂದ ಕಾಣುತ್ತಾ ಅವರ ಪಾದೋದಕ ಶೇಷ ಪ್ರಸಾದವನ್ನು ಅವಧಾನದಿಂದ ಭೋಗಿಸುವವನೇ ಪ್ರಸಾದಿಯೆನಿಸುವನು. ಲೋಕದಲ್ಲಿ ಲಿಂಗಪೂಜಕರು ಲಕ್ಷ ಜನರಿರಬಹುದು ಶಿವಭಕ್ತರು ಸಾವಿರ ಸಂಖ್ಯೆಯಲ್ಲಿರಬಹುದು. ಆದರೆ ಘನಸುಪ್ರಸಾದಕ್ಕೆ ಯೋಗ್ಯವಾದ ಪ್ರಸಾದಿಗಳು ಇಬ್ಬರೋ ಮೂವರೋ ಇರಬಹುದು. ಇದು ಶಿವಾಗಮಗಳ ಹಾಗೂ ಶಿವಾನುಭವಿಗಳ ಅಭಿಪ್ರಾಯ. ಆದ್ದರಿಂದ ಭಕ್ತನು ತನ್ನ ಸಮಸ್ತವನ್ನೂ ತನು ಮನ ಧನವನ್ನು ಗುರುಲಿಂಗ ಜಂಗಮಕ್ಕೆ ಭಕ್ತಿಯಿಂದ ಸಮರ್ಪಿಸಿ ಗುರುವಿನೊಂದವಿದ ಶುದ್ಧ ಪ್ರಸಾದವನ್ನು ಲಿಂಗದಿಂದ ಪ್ರಾಪ್ತವಾದ ಸಿದ್ಧಪ್ರಸಾದವನ್ನು ಜಂಗಮವು ಕೊಟ್ಟ ಪ್ರಸಿದ್ಧ ಪ್ರಸಾದವನ್ನು ಸಾವಧಾನದಿಂದಲೂ ಶ್ರದ್ಧೆಯಿಂದಲೂ ಉಪಭೋಗಿಸಬೇಕು. ಇದರಿಂದ ಸರ್ವೇಂದ್ರಿಯಗಳ ಉಪಟಳವೂ ಅಡಗಿ ಸ್ಥಿರ ಜ್ಞಾನವಳವಟ್ಟು ನಿರ್ಮಲ ಹೃದಯನಾಗಿ ವಿರಾಜಿಸುವನು. ಭವಿಶಬ್ದ, ಕುಶಶಬ್ದ, ಹಿಂಸೆಶಬ್ದ, ಅನೃತಶಬ್ದ, ಕರ್ಕಶಶಬ್ದ, ಡಾಂಬಿಕಶಬ್ದ, ಭೀಭತ್ಸ – ಎಂಬ ಎಂಟು ಶಬ್ದಗಳನ್ನು ನಾಲಗೆಯಿಂದ ನುಡಿಯದಿರುವವನೇ ಘನಸುಪ್ರಸಾದಿ ಎಂಬುದಾಗಿ ಆಗಮಗಳು ಹೇಳುತ್ತಿವೆ. ಗುರುಲಿಂಗ ಜಂಗಮದ ಸುಪ್ರಸಾದಕ್ಕೆ ಹೇಸಿ ಚಂಡಾಲ ಸತಿಯ ಎಂಜಲ ತಿಂದು ರಮಿಸುವನು. ನಾಯ ನರಕಕ್ಕೆ ಹೋಗುವನು. ಭಕ್ಷ್ಯಭೋಜ್ಯಾದಿಗಳನ್ನು ತನ್ನ ಇಷ್ಟಲಿಂಗಕ್ಕೆ ಸಮರ್ಪಿಸದೆ ಮರೆತು ಉಂಡದ್ದೇ ಆದರೆ ಅದರ ಪ್ರಾಯಃಶ್ಚಿತ್ತಕ್ಕಾಗಿ ತನ್ನ ನಾಲಗೆಯನ್ನು ಕತ್ತರಿಸಿಕೊಳ್ಳಬೇಕು. ಲಿಂಗದ ಮೇಲೆ ಲಿಂಗವನ್ನು ಧರಿಸಿಕೊಂಡು ಲಿಂಗಾಂಗಿಯೆನಿಸಿದ ಮೇಲೆ ಒಂದು ಹುಲ್ಲುಕಡ್ಡಿ ಮೊದಲುಗೊಂಡು ಅನ್ನಪಾನವಸ್ತ್ರಾದಿಗಳನ್ನು ಲಿಂಗಕ್ಕರ್ಪಿಸದೇ ಭೋಗಿಸಿದ್ದೇ ಆದರೆ ಆಭೋಗೋಪಭೋಗಗಳೆಲ್ಲವೂ ಅಶುದ್ಧವಾಗಿ ಪಾಪರೂಪಗಳಾಗುವುವು. ಇದು ಪ್ರಸಾದ ಮಹಾತ್ಮ್ಯ ಸ್ಥಲವು. ಗಿರಿವಿನೆದುರಿನಲ್ಲಿ ಹಾಸ್ಯ ಮಾಡಿದವನು, ಪ್ರತ್ಯುತ್ತರ ಕೊಟ್ಟವನು ವಾಗ್ವಿನೋದ ಮಾಡುವವನು, ಕಾಲು ಚೆಲ್ಲಿ ಕುಳಿತುಕೊಳ್ಳುವವನು ಹಲ್ಲುಜ್ಜುವವನು ಮುಖ ಮಾರ್ಜನೆಮಾಡುವವನು, ಕೈಕಾಲು ತೊಳೆದುಕೊಳ್ಳುವವನು ದುರ್ಗತಿಯನ್ನು ಹೊಂದುತ್ತಾನೆ. ಅರಸನಾಗಲಿ ಆಳಾಗಲಿ ಪಂಡಿತನಾಗಲೀ ಪಾಮರನಗಲಿ ಯಾರೇ ಆಗಲಿ ಗುರುಮಠಕ್ಕೆ ಗುರುಸಮೀಪಕ್ಕೆ ಹೋಗುವಾಗ ಬರಿಗಾಲಿನಿಂದ ಹೋಗಬೇಕು. ವಾಹನಾದಿಗಳನ್ನು ದೂರದಲ್ಲೇ ಬಿಟ್ಟು ಕಾಲ್ನಡಿಗೆಯಲ್ಲಿ ಹೋಗಬೇಕು. ಲಜ್ಜೆ ಬಿಟ್ಟು ಭಯಭಕ್ತಿಯಿಂದ ತನ್ನ ಒಡಲನ್ನು ಗುರುಚರಣದಲ್ಲಿ ಈಡಾಡಬೇಕು. ಹರನೇ ಗುರುವಾಗಿ ಬಂದು ಮುಕ್ತಿಯನ್ನು ಬಯಸಿ ಬಂದ ಶಿಷ್ಯನ ಹಣೆಯಲ್ಲಿ ಬ್ರಹ್ಮ ಬರೆದ ದುರ್ಲಿಖಿತವನ್ನು ಅಳಿಸಿ, ಕರಸ್ಥಲಕ್ಕೆ ಲಿಂಗವನ್ನು ಕೊಟ್ಟು, ಕಿವಿಯಲ್ಲಿ ಮಂತ್ರವನ್ನು ಉಸಿರಿ ಪರಿಭವಗಳನ್ನು ಕಳೆದು ಅನವರತವೂ ರಕ್ಷಿಸುತ್ತಾನೆ. ಗುರುವಿನ ಪಾದಾಂಗುಷ್ಠದಲ್ಲಿ 64 ತೀರ್ಥಂಗಳು ಅಡಗಿವೆ. ಪಾದದ ಮೇಲ್ಭಾಗದ ಅರ್ಧಭಾಗ ಸಪ್ತಸಾಗರಗಳಿವೆ. ಉಳಿದರ್ಧ ಭಾಗದಲ್ಲಿ ಕುಲಪರ್ವತಗಳಿವೆ. ಹಿಮ್ಮಡಿಯಲ್ಲಿ ಸಮಸ್ತ ಗ್ರಹ ನಕ್ಷತ್ರರಾಶಿಗಳಡಗಿವೆ. ಮೊಣಕಾಲಿನಲ್ಲಿ 36 ತತ್ವಗಳಿವೆ. ಇದು ಗುರುವಿನ ಪಾದಮಹಿಮೆ. ಗುರುವೆ ಶಿವ, ಗುರುವೇ ಮಂತ್ರ, ಗುರುವೇ ತಂದೆ ತಾಯಿ ಬಂಧುಬಳಗ, ಗುರುವೇ ದೈವ ಗತಿ ಮತಿ ಎಲ್ಲವೂ– ಎಂಬುದಾಗಿ ವೇದ ಶಾಸ್ತ್ರಗಳು ಹೊಗಳುತ್ತಿವೆ. ಸಕಲ ತತ್ವಗಳಲ್ಲೆಲ್ಲಾ ಗುರುವೇ ತಾನಧಿಕ ಪರತತ್ವವು. 'ನಗುರೋರಧಿಕಂ ತತ್ವಂ ನಗುರೋರಧಿಕಂ ತತ್ವಂ ನಗುರೋರಧಿಕಂ ತತ್ವಂ' ಎಂಬುದಾಗಿ ಅಖಿಲ ನಿಗಮಾಗಮಗಳು ಸಾರಿ ಹೇಳುತ್ತಿವೆ. ಪರುಷಮಣಿಯನ್ನು ಸೋಂಕಿದ ಕಬ್ಬಿಣವು ಚಿನ್ನವಾಗುವಂತೆ ವರಗುರುವಿನ ಕಟಾಕ್ಷ ಬಿದ್ದರೆ ಸಾಕು ಶಿಷ್ಯ ತಾನೇ ಶಿವನಾಗುವನು. ಆದ್ದರಿಂದ ಗುರುವಿಗಿಂತ ಪರತರವಾದ ಅಧಿಕ ತತ್ವವಿಲ್ಲವೆಂಬುದಾಗಿ ಶಿವಶಾಸನಗಳು ಪ್ರತಿಪಾದಿಸುತ್ತವೆ, ಇದೇ ಗುರುಮಹಾತ್ಮ್ಯ ಸ್ಥಲ. ಸುಪ್ರಸಾದಿಯಾದವನು ಗುರುಮಹಿಮೆಯನ್ನು ಅರಿತ ಮೇಲೆ ಲಿಂಗ ಮಹಾತ್ಮ್ಯೆಯನ್ನು ತಿಳಿಯಬೇಕು. ಪರಿಪೂರ್ಣ ಲಿಂಗವು ಮಾತುಮನಂಗಳಿಗೆ ಅತ್ತತ್ತ ಮೀರಿ, ಆದ್ಯಂತರಹಿತವಾಗಿ ಬಿಂದು ನಾದ ಕಲಾತೀತವಾಗಿರುವುದು. ಇಂಥ ಲಿಂಗದ ಮಹಿಮೆ ಅಪಾರ. ಅದು ಪರಮಪರತರ ಪರಾನಂದ ಪರಮಾತ್ಮ ರೂಪ. ಸುಸ್ಥಿರ ಪರಂಜ್ಯೋತಿಯಾಕಾರ. ಸರ್ವಗ ಶುಭಕರ ಅನಾಮಯ ಅಪ್ರಮೇಯ ನಿರುಪಮ ನಿರಾಕಾರ

ನಿತ್ಯ ನಿರ್ಮಲ ನಿರಾವರಣ, ನಿಷ್ಕಲ ನಿಷ್ಪ್ರಪಂಚ ನಿಗಮಾತೀತ ಸರ್ವ ತತ್ತ್ವಾಲಯವು. ಈ ಮಹಾಲಿಂಗವು ಸರ್ವಭೂತಗಳಿಗೆ ಆಲಯ. ಸರ್ವತತ್ವಗಳಿಗೆ ಆಧಾರ, ಸಕಲ ಚರಾಚರ ಜಗತ್ತಿನ ಲಯಗಮಗಳಿಗೆ ನೆಲೆ. ಇಂಥ ಲಿಂಗಶಬ್ದ ವನ್ನು ಒಂದು ಸಾರಿ ಕಿವಿಯಲ್ಲಿ ಕೇಳಿದರೆ ಸಾಕು, ಸರ್ವತಾಪತ್ರಯಗಳು ಸರ್ವದಾರಿದ್ರ್ಯಗಳು ಜನನ ಬಂಧಗಳು ಬಿಟ್ಟು ಓಡುವವು. ಪ್ರೀತಿಯಿಂದ ಒಮ್ಮೆ ದರ್ಶನ ಮಾಡಿದರೆ ಸಾಕು ಕೋಟಿ ಯಾಗ ಮಾಡಿದ್ಯ ಫಲಕ್ಕಿಂತಲೂ ಅಧಿಕತರವಾದ ಫಲವು ಪ್ರಾಪ್ತವಾಗುವುದು. ಜಗದೊಳಗಿರುವ ಕೋಟಿ ಕೋಟಿ ಪುಣ್ಯತೀರ್ಥಗಳು ಪುಣ್ಯಕ್ಷೇತ್ರಗಳೆಲ್ಲವೂ ಈ ಘನಮಹಾಲಿಂಗ ದೊಳಗಿವೆ. ಹೆಚ್ಚೇನು? 'ಲಿಂಗಮಧ್ಯೇ ಜಗತ್ಸರ್ವಂ' ಎಂಬುದಾಗಿ ಸರ್ವಶ್ರುತಿಗಳೂ ಸಾರುತ್ತಿವೆ. ಇದು ಲಿಂಗ ಮಹಾತ್ಮ್ಯ ಸ್ಥಲ. ಜಂಗಮ ಯಾವಾಗಲೂ ಮಹಾಪ್ರಸಾದಿಯ ಧನದಲ್ಲಿ (ಪ್ರಾಣದಲ್ಲಿ) ಸನ್ನಿಹಿತನಾಗಿರುತ್ತಾನೆ. ಗುರುವಿಗಿಂತ. ಲಿಂಗಕ್ಕಿಂತ ಅಧಿಕನು ಜಂಗಮ. ಇಂಥ ಜಂಗಮ ತನ್ನ ಪಾದೋದಕ ಪ್ರಸಾದಾನುಗ್ರಹದಿಂದ ಮರ್ತ್ಯದ ಮನುಜರ ಪಾಪವನ್ನು ತೊಳೆದು ಪಾವನರನ್ನಾಗಿಸಿ ಭೋಗ ಮೋಕ್ಷಂಗಳನ್ನು ಕೊಡುತ್ತಾನೆ. ಹರನೇ ಜಂಗಮರೂಪಿಯಾಗಿ ಧರೆಗಿಳಿದು ಬಂದು ಸಾಧಕ ಭಕ್ತರನ್ನು ದೀಕ್ಷಿಸಿ ಬೋಧಿಸಿ ಪರಿಪೂರ್ಣರನ್ನಾಗಿ ಮಾಡಿ ತಾನು ಪರಮಾನಂದದಿಂದ ಜಗದ್ಭರಿತನಾಗಿ ತಂಗಾಳಿಯಂತೆ ಸುಳಿಯುತ್ತಾನೆ. ಇದು ಜಂಗಮ ಮಹಾತ್ಮ್ಯ ಸ್ಥಲ. ಗುರುಲಿಂಗಜಂಗಮ ತತ್ತ್ವಗಳು ಪ್ರಕಟವಾಗುವುದೇ ಭಕ್ತನ ಭಕ್ತಿಯಿಂದ. ಇಂಥ ಭಕ್ತನ ಗುಣಗಳೆಂದರೆ ಜ್ಞಾನ ವೈರಾಗ್ಯ ಸಂತೋಷ ಕ್ಷಮಾಧೃತಿ ಸಮಾಧಿ ಮುಂತಾದುವುಗಳೇ. ಇಂಥ ಸದ್ಗುಣಗಳನ್ನು ಸದ್ಭಕ್ತನ ಹೃದಯವೇ ಶಿವಾಲಯ, ಕೈಲಾಸ. ತನುವ ಗುರುಸೇವೆಯಲ್ಲಿ ಸವೆಸಿ, ಮನವನ್ನು ಲಿಂಗದಲ್ಲಿ ನಿಲಿಸಿ, ಧನವನ್ನು ಜಂಗಮಕ್ಕೆ ಅರ್ಪಿಸಿ ವರದಾಸೋಹ ಮಾಡುವ ಭಕ್ತನೇ ನಿತ್ಯನು ಸತ್ಯನು. ಅಂಥ ಸದ್ಭಕ್ತನಲ್ಲಿ ಶಿವನಿದ್ದಾನೆಯೇ ಹೊರತು ಕನಕಗಿರಿ ಹೇಮಗಿರಿ ಕೈಲಾಸದಲಿಲ್ಲ. ಇಂಥ ಸದ್ಭಕ್ತನ ದರ್ಶನ ಮಾತ್ರದಿಂದಲೇ ಬ್ರಹ್ಮಹತ್ಯದಿ ಕೋಟ್ಯುಪಕೋಟಿ ಪಾತಕಗಳು ಸುಟ್ಟು ಹೋಗುವುವು. ಅವನನ್ನು ಮಾತನಾಡಿಸಿದರೆ ಸಾಕು ಕೋಟಿ ಯಜ್ಞದ ಫಲವು ದೊರೆಕುವುದು. ಸದ್ಭಕ್ತನಿಟ್ಟ ಅನ್ನವನುಂಡರೆ ನೀರ ಕುಡಿದರೆ ಸಾಕು ಪಾಪಿಯು ಪಾವನನಾಗುತ್ತಾನೆ ಎಂಬುದಾಗಿ ಪುರಾಣಗಳು ಸಾರುತ್ತಿವೆ. ನೀಡಿದ ಭಕ್ಷ್ಯ ಭೋಜ್ಯಾದಿ ಎಡೆಗಿಂತಲೂ ಭಕ್ತನ ನಾಲಗೆಯ ತುದಿಯ ರಸವೇ ಶಿವನಿಗೆ ಇಷ್ಟವಾಗುವೆಂಬುದಾಗಿ ಶಿವಾಗಮಗಳು ಹೊಗಳುತ್ತಿವೆ. ಸದ್ಭಕ್ತನೇ ಶಿವನಿಗೆ ಚೇತನ; ಶಿವನೇ ಸದ್ಭಕ್ತನಿಗೆ ಚೇತನ, ಹಾಗಾಗಿ ಸದ್ಭಕ್ತನಂತಿಹನು ಶಿವನು; ಶಿವನಂತಿಹನು ಸದ್ಭಕ್ತನು. ಹೀಗೆ ಈರ್ವರಲ್ಲಿಂಯೂ ಭೇದವಿಲ್ಲವಾಗಿ ಭಕ್ತನಾದವನಿಗೆ ಯಮಭೀತಿಯಾಗಲಿ ಸಂಸಾರ ಭಯವಾಗಲೀ ಇರುವುದಿಲ್ಲ. ಲೋಕದಲ್ಲಿ ಕೆಲವರು ಸಾಧಕರು ಜ್ಞಾನವನ್ನು ಕೆಲವರು ಕರ್ಮವನ್ನು ಆಶ್ರಯಿಸಿರುವರು. ಆದರೆ ಶಿವನಾದರೋ ಭಕ್ತನ ಪಾದುಕೆಯನ್ನು ಆಶ್ರಯಿಸಿರುವರು. ಆದರೆ ಶಿವನಿಗಿಂತಲೂ ಭಕ್ತನೇ ಅಧಿಕನು. ಇದು ಭಕ್ತ್ಯ ಮಾಹಾತ್ಮ್ಯ ಸ್ಥಲ. ಕರಣೇಂದ್ರಿಯಗಳನ್ನು ಜಯಿಸಿ, ಅರಿಷಡ್ವರ್ಗಗಳನ್ನು ಸುಟ್ಟು, ಅಷ್ಟಮದಗಳನ್ನು ಮೆಟ್ಟಿ ಸಂಸಾರವನ್ನು ತೊರೆದು ಸುಜ್ಞಾನ ಸನ್ಮಾರ್ಗದಲ್ಲಿ ನಡೆಯುತ್ತಾ ನಿತ್ಯಾನಂದದಲ್ಲಿ ವಿಹರಿಸುವವನೇ ಶರಣನು. ಇಂಥ ಶರಣನಿರುವ ಸ್ಥಳವೇ ಸುಕ್ಷೇತ್ರ, ಆಡುವ ನುಡೀಯೇ ಮಂತ್ರ, ಮಾಡುವ ಕ್ರಿಯೆಯೇ ಮಹಾಯಜ್ಞ, ಮಿಂದ ನೀರೇ ತೀರ್ಥ. ಎಲ್ಲಿ ದೃಷ್ಟಿ ಬೀಳುವುದೋ ಅಲ್ಲೆಲ್ಲಾ ಅದೆಲ್ಲಾ ಪವಿತ್ರ, ಇಂಥ ಪರಮಮಾಂಗಲ್ಯ ರೂಪನಾದ ಶರಣನೇ ಸಾಕ್ಷಾತ್ತನಾದ ಪರಶಿವನು. ಇಂಥ ಶರಣನನ್ನು ನೋಡುವ ಮಾತ್ರದಿಂದಲೇ ಸಾಲೋಕ್ಯ ಸಾಮೀಪ್ಯ ಸಾನ್ನಿಧ್ಯ ಸಾರೂಪ್ಯಾದಿ ಮೋಕ್ಷಗಳು ಪ್ರಾಪ್ತವಾಗುವುವು. ನಲವಿಂದ ನಮಿಸಿ ಭಜಿಸಿದರೆ ಸಾಕು ಸಂಸಾರದ ತಾಪತ್ರಯಗಳು ಅಳಿದು ಹೋಗುವುವು. ಆ ಶರಣರ ಸಂಗವೇ ನಿಜಮುಕ್ತಿಯನ್ನು ತಂದು ಕೊಡುವುದು. ಆಶಾರಹಿತನಾಗಿ ಪರಮಘನ ಶಾಂತಿ ಒಳಗೊಂಡು ಯಾರೊಡನೆಯೂ ವೈರವಿಲ್ಲದೆ ಸಮತ್ವರೂಪಯೋಗವುಳ್ಳ ಶರಣರ ಪಾದಧೂಳಿಯ ಕಣಗಳಿಂದ ಶಿವನು ಪೂಜಿಸಲ್ಪಡುವನು. ಇದೇ ಶರಣ ಮಹಾತ್ಮ್ಯ ಸ್ಥಲ. ಇಂಥ ಮಹಾಶಿವಶರಣನ ಘನ ಸುಪ್ರಸಾದದ ಮಹಿಮೆಯಾದರೋ ಅತ್ಯದ್ಭುತ. ಅಂಥ ಪ್ರಸಾದ ಸೇವೆಯಿಂದ ಕುಷ್ಠ ಅಪಸ್ಮಾರಾದಿ ರೋಗಗಳೂ ತಾಪತ್ರಯಗಳೂ ನಿವಾರಣೆಯಾಗುವುವು. ಗೃಹಭಾಧೆ ಭೂತ ಚೇಷ್ಟೆಗಳು ನಿಮಿಷ ಮಾತ್ರದಿ ಬಿಟ್ಟೋಡುವುವು. ಇಂಥ ಪ್ರಸಾದದ ಘನ ಮಹಿಮೆಯು ಹರಿಮುಖ್ಯ ಅಮರರಿಗೂ ಕಿನ್ನರ ಪುರುಷ ಗಂದರ್ವಾದಿ ದೇವಯೋಗಿಗಳಿಗೂ ತಿಳಿಯಲು ಅಸಾಧ್ಯವು. ಸ್ಕಂದ ಭೃಂಗಿರಿಟಿ ನಂದಿಕೇಶ್ವರ ವೀರಭದ್ರಾದಿ ಪ್ರಮಥರೂ, ಅಗಸ್ತ್ಯ ದೂರ್ವಾಸ ಮಹಾಕಾಲ ದಧೀಚಿ ಪಾಣಿನಿ ಕಣಾದ ಬಾಣಾಸುರ ರಾವಣ ವಸಿಷ್ಠ ವಾಲ್ಮೀಕಿ ಕಾಳಿದಾಸ ಕಣ್ವ ಭೃಗು ಭಾರದ್ವಾಜ ಅತ್ರಿ ಗೌತಮದಿ ಆದಿಶೈವರೂ ಇಂಥ ಲಿಂಗರೂಪಿ ಶಿವನ ಸುಪ್ರಸಾದವನ್ನು ನಿತ್ಯವೂ ಸೇವಿಸುವರು. ನಂಬಿಕೆಯಿಂದ ಸ್ವೀಕರಿಸಿದರೆ ಸುಪ್ರಸಾದವೆನಿಸುವುದು. ಹಾಗಲ್ಲದೇ ನಂಬದೇ ಅದು ಎಂಜಲೆಂದು ಉದಾಸೀನ ಪಟ್ಟು ಧರ್ಮವಿರೋಧಕ್ಕೆ ಅಂಜಿ ಅಸಡ್ಡೇಯಿಂದ ಸ್ವೀಕರಿಸಿದ್ದೇ ಆದರೆ ಅದು ಕಾಳಕೂಟ ವಿಷವಾಗುವುದೆಂಬುದಾಗಿ ಆಗಮ ಶಾಸ್ತ್ರಗಳು ಹೇಳುತ್ತಿವೆ. ಹೀಗೆ ಪಾಸಾದದ ಮಹಿಮೆ ವರ್ಣಿಸಲು ಅಸದಳವಾಗಿರುತ್ತದೆ. ಇದು ಶಿವ ಮಹಾತ್ಮ್ಯ ಸ್ಥಲವು. ಈ ಏಳೂ ಪ್ರಸಾದಿ ಸ್ಥಲದ ಅವಾಂತರಸ್ಥಲಗಳು.





## ಶ್ರೀ ಸಿದ್ಧಗಂಗಾ ಮಠದ ದಾಸೋಹ ನಿಧಿ

## ಅನ್ನದಾನಕ್ಕೊಂದು ಅಪೂರ್ವ ಅವಕಾಶ

'ಅನ್ನಾದ್ಭವಂತಿ ಭೂತಾನಿ ಅಂದರೆ ಅನ್ನದಿಂದಲೇ ಸಕಲ ಜೀವಿಗಳ ಉತ್ಪತ್ತಿ.'

'ಅನ್ನದಾನಕ್ಕಿಂತ ಇನ್ನು ದಾನವಿಲ್ಲ'

ಶ್ರೀಮಠದಲ್ಲಿ ಕರ್ನಾಟಕ, ಆಂಧ್ರಪ್ರದೇಶ, ಮಹಾರಾಷ್ಟ್ರ, ತಮಿಳುನಾಡು ಪ್ರಾಂತ್ಯಗಳಿಂದ ಅಧ್ಯಯನಕ್ಕೆ ಮಕ್ಕಳು /ವಿದ್ಯಾರ್ಥಿಗಳ ಸಂಖ್ಯೆ 8000 ಮುಟ್ಟಿದೆ. ಇಲ್ಲಿ ಜಾತಿ ಭೇದವಿಲ್ಲ. ಪ್ರತಿದಿನ ಮಕ್ಕಳ ಪೋಷಕರು, ಪ್ರವಾಸಿಗರು ಶ್ರೀಕ್ಷೇತ್ರದ ಭಕ್ತರು ಸಹಸ್ರಾರು ಮಂದಿ ಆಗಮಿಸುತ್ತಾರೆ. ಎಲ್ಲರಿಗೂ ದಾಸೋಹ ನಡೆಯಬೇಕು. ಸ್ವಂತ ಆಸ್ತಿ ಬೆಂಬಲವಿಲ್ಲ. ಶ್ರೀ ಶ್ರೀಗಳವರ ಆತ್ಮಬಲ ಮತ್ತು ಭಕ್ತರ ಬೆಂಬಲದ ಮೇಲೆ ಈ ಕಾರ್ಯ ನಡೆಯುತ್ತಿದೆ. ಈ ದಾಸೋಹ ಸೇವೆಯಲ್ಲಿ ಪಾಲ್ಗೊಳ್ಳುವ ಅಪೂರ್ವ ಅವಕಾಶವನ್ನು ಶ್ರೀಗಳವರು ಅನುಗ್ರಹಿಸಿದ್ದಾರೆ.

ಈ ಯೋಜನೆಯಂತೆ ಮಹನೀಯರು ಕೊನೆಯ ಪಕ್ಷ ರೂ. 2000/- ಕಡಿಮೆಯಿಲ್ಲದಂತೆ ಶ್ರೀಮಠದ ದಾಸೋಹನಿಧಿಗೆ ಅರ್ಪಿಸಬೇಕು. ಇದನ್ನು ಶಾಶ್ವತ ನಿಧಿಯನ್ನಾಗಿ ಇಟ್ಟು (ಎಫ್.ಡಿ.) ಅದರ ಬಡ್ಡಿ ಹಣವನ್ನು ದಾಸೋಹಕ್ಕೆ ಬಳಸಲಾಗುವುದು.

**No.: DIT/E/80G** ಪ್ರಕಾರ ಆದಾಯ ತೆರಿಗೆ ವಿನಾಯಿತಿ ಇದೆ.

ಶ್ರೀಮಠದ ಭಕ್ತಮಂಡಳಿ ಪರವಾಗಿ

### ಈ ಪುಣ್ಯಕಾರ್ಯಫಲದ ಶ್ರೀ ಸಿದ್ಧಗಂಗಾ ಮಠದ ದಾಸೋಹ ನಿಧಿಗೆ ಅರ್ಪಿಸಿರುವವರ ವಿಳಾಸ

(ಮುಂದುವರೆದುದು)

| ಕ್ರಸಂ. | ಹೆಸರು ಮತ್ತು ವಿಳಾಸ | ಮೊತ್ತ | ಕ್ರಸಂ. | ಹೆಸರು ಮತ್ತು ವಿಳಾಸ | ಮೊತ್ತ |
|---|---|---|---|---|---|
| 3215. | ಶ್ರೀಮತಿ ಹೆಗ್ಗೆರೆ ತಾಯಮ್ಮ ತ್ಯಾಗರಾಜನಗರ, ಚಳ್ಳಕೆರೆ, ಚಿತ್ರದುರ್ಗ ಜಿಲ್ಲೆ. | 1,00,000.00 | 3226. | ಶ್ರೀ ಎಂ. ಈಶ್ವರಪ್ಪ, ಕನ್ನಡ ಪಂಡಿತರು ಶ್ರೀ ಸಿದ್ಧಲಿಂಗೇಶ್ವರ ಸಂಸ್ಕೃತ ಕಾಲೇಜು, ಶ್ರೀ ಸಿದ್ಧಗಂಗಾ ಮಠ, ತುಮಕೂರು, | 2001.00 |
| 3216. | ಶ್ರೀ ಎನ್. ಲಿಂಗಪ್ಪ ಮತ್ತು ಮಕ್ಕಳು ನಿ.ಶಾಲಾ. ಶಿಕ್ಷಕರು, ಕೆಂಪಾಪುರ, ಚಿಕ್ಕಬಾಣಾವರ ಅಂಚೆ, ಬೆಂ.ನ.ಜಿಲ್ಲೆ. | 1,00,000.00 | 3227. | ಶ್ರೀ ಚಂದ್ರಶೇಖರಯ್ಯ, ಸಂಸ್ಕೃತ ಪಂಡಿತರು, ಡಿಟ್ಟೋ ಕಾಲೇಜು. | 2001.00 |
| 3217. | ಶ್ರೀ ಕೆ. ರಾಜಣ್ಣ, ನಂ.369, 'ಆರಾಧನಾ' 32ಕ್ರಾಸ್, 11ನೇ ಮೈನ್, ಜಯನಗರ 4ನೇ ಬ್ಲಾಕ್, ಬೆಂಗಳೂರು. | 25,000.00 | 3228. | ಶ್ರೀ ಪಿ.ಎಸ್. ಸಿದ್ಧಗಂಗಯ್ಯ, ಕನ್ನಡ ಪಂಡಿತರು ಶ್ರೀ ಸಿದ್ಧಲಿಂಗೇಶ್ವರ ಸಂಸ್ಕೃತ ಕಾಲೇಜು, ಶ್ರೀ ಸಿದ್ಧಗಂಗಾ ಮಠ, ತುಮಕೂರು, | 2001.00 |
| 3218. | ಶ್ರೀಮತಿ ಸುಶೀಲಮ್ಮ ದ್ವಿ.ದ.ಸ. ಶ್ರೀ.ರಂ.ಗ್ರಾ.ಪ್ರಾ.ಶಾಲೆ, ನೇರಳೇಕೆರೆ, ಮಧುಗಿರಿ ತಾ., ತುಮಕೂರು ಜಿ. | 1000.00 | 3229. | ಶ್ರೀ ಡಿ.ಎಸ್. ಚಂದ್ರಶೇಖರಯ್ಯ ಉಪ ಪ್ರಾಧ್ಯಾಪಕರು, ಶ್ರೀ ಸಿದ್ಧಲಿಂಗೇಶ್ವರ ಸಂಸ್ಕೃತ ಕಾಲೇಜು, ಶ್ರೀ ಸಿದ್ಧಗಂಗಾ ಮಠ, ತುಮಕೂರು, | 2 001.00 |
| 3219. | ಶ್ರೀ ಕೆ. ನಂಜುಂಡೇಶ್ವರ ಗುಪ್ತ ಪ್ರ.ಶಾ.ಸ, ಶ್ರೀ.ರಂ.ಗ್ರಾ.ಪ್ರಾ.ಶಾಲೆ, ನೇರಳೇಕೆರೆ, ಮಧುಗಿರಿ ತಾ., ತುಮಕೂರು ಜಿ. | 1000.00 | 3230. | ಶ್ರೀ ಬಿ. ರಾಮಚಂದ್ರರಾವ್, ಉಪಪ್ರಾಧ್ಯಾಪಕರು, ಡಿಟ್ಟೋ ಕಾಲೇಜು. | 2001.00 |
| 3220. | ಶ್ರೀ ಎನ್.ಲಕ್ಷ್ಮೀನರಸಪ್ಪ ಗ್ರೂಪ್ ಡಿ. ನೌಕರ ಶ್ರೀ.ರಂ.ಗ್ರಾ.ಪ್ರಾ ಶಾಲೆ, ನೇರಳೇಕೆರೆ, ಮಧುಗಿರಿ ತಾ., ತುಮಕೂರು ಜಿ. | 1000.00 | 3231. | ಶ್ರೀ ಆರ್. ಶ್ರೀಧರಶಾಸ್ತ್ರಿ, ಪ್ರಾಧ್ಯಾಪಕರು, ಡಿಟ್ಟೋ ಕಾಲೇಜು. | 2001.00 |
| 3221. | ಶ್ರೀ ರುದ್ರಸ್ವಾಮಿ, ಮುಖ್ಯಶಿಕ್ಷಕರು, ಸಂಸ್ಕೃತ ಪಾಠಶಾಲೆ, ಕೆ.ಬಿ. ಮಠ, ಮಾಗಡಿ ತಾ., ಬೆಂ.ಗ್ರಾ.ಜಿಲ್ಲೆ. | 2000.00 | 3232. | ಶ್ರೀ ಶಿವಲಿಂಗಸ್ವಾಮಿಗಳು, ಪ್ರಾಧ್ಯಾಪಕರು, ಡಿಟ್ಟೋ ಕಾಲೇಜು. | 2001.00 |
| 3222. | ಶ್ರೀ ಎಸ್.ನಾಗರಾಜು, ಮುಖ್ಯಶಿಕ್ಷಕರು, ಶ್ರೀ.ಉ.ಶಿ.ಗ್ರಾ.ಪ್ರಾ ಶಾಲೆ, ಗಟ್ಟೀಪುರ, ಮಾಗಡಿ ತಾ., ಬೆಂ.ಗ್ರಾ.ಜಿಲ್ಲೆ. | 1001.00 | 3233. | ಶ್ರೀ ಎಸ್.ಷಡಕ್ಷರಯ್ಯ, ಉಪಪ್ರಾಧ್ಯಾಪಕರು, ಡಿಟ್ಟೋ ಕಾಲೇಜು. | 2001.00 |
| 3223. | ಶ್ರೀ ಆರ್. ರಂಗಪ್ಪ, 8ನೇ ಅಡ್ಡರಸ್ತೆ, ಎಸ್.ಎಸ್.ಪುರಂ, ತುಮಕೂರು. | 3001.00 | 3234. | ಶ್ರೀ ಬಸವರಾಜು, ಉಪಪ್ರಾಧ್ಯಾಪಕರು, ಡಿಟ್ಟೋ ಕಾಲೇಜು: | 2001.00 |
| 3224. | ಶ್ರೀ ಗುರುಬಸವದೇವರು, ಮುಖ್ಯಶಿಕ್ಷಕರು, ಬಸವೇಶ್ವರ ಬಡಾವಣೆ, ಕ್ಯಾತ್ಸಂದ್ರ, ತುಮಕೂರು. | 2001.00 | 3235. | ಶ್ರೀ ಜೆ.ಸಿ. ರಾಜಶೇಖರಯ್ಯ, ಉಪಪ್ರಾಧ್ಯಾಪಕರು, ಡಿಟ್ಟೋ ಕಾಲೇಜು. | 2001.00 |
| 3225. | ಡಾ|| ಸಿ.ಸದಾಶಿವಯ್ಯ, ಅಸಿಸ್ಟೆಂಟ್ ಪ್ರೊಫೆಸರ್, ಸಿವಿಲ್ ಇಂ. ವಿಭಾಗ ಎಸ್.ಐ.ಟಿ., ತುಮಕೂರು. | 3000.00 | 3236. | ಶ್ರೀ ಎಂ.ಶಾಂತಕುಮಾರ್, ಉಪಪ್ರಾಧ್ಯಾಪಕರು, ಡಿಟ್ಟೋ ಕಾಲೇಜು. | 2001.00 |

| ಕ್ರ.ಸಂ. | ಹೆಸರು ಮತ್ತು ವಿಳಾಸ | ಮೊತ್ತ |
|---|---|---|
| 3237. | ಶ್ರೀಮತಿ ಎಸ್. ಲಲಿತಮ್ಮ, ಸ.ಶಿ. ಡಿಟ್ಟೋ ಕಾಲೇಜು. | 2001.00 |
| 3238. | ಶ್ರೀ ಡಿ.ಎಂ. ಮಲ್ಲಿಕಾರ್ಜುನಯ್ಯ, ಸ.ಶಿ. ಡಿಟ್ಟೋ ಕಾಲೇಜು. | 2001.00 |
| 3239. | ಶ್ರೀ ಬಿ.ಶಿವಶಂಕರಯ್ಯ, ಸ.ಶಿ. ಡಿಟ್ಟೋ ಕಾಲೇಜು. | 2001.00 |
| 3240. | ಶ್ರೀ ಹೆಚ್.ಎ.ಕುಮಾರ್, ಸ.ಶಿ. ಡಿಟ್ಟೋ ಕಾಲೇಜು. | 2001.00 |
| 3241. | ಶ್ರೀ ಈಶಪ್ಪ ಮಾಯಕಾರ್, ಸ.ಶಿ. ಡಿಟ್ಟೋ ಕಾಲೇಜು. | 2001.00 |
| 3242. | ಶ್ರೀ ಎಸ್.ಎಸ್. ನಿರಂಜನಮೂರ್ತಿ, ಸ.ಶಿ. ಡಿಟ್ಟೋ ಕಾಲೇಜು. | 2001.00 |
| 3243. | ಶ್ರೀ ಜಿ.ವಿ. ಮನೋಹರ, ಸ.ಶಿ. ಡಿಟ್ಟೋ ಕಾಲೇಜು. | 2001.00 |
| 3244. | ಶ್ರೀಮತಿ ಶೋಭ, ಸ.ಶಿ. ಡಿಟ್ಟೋ ಕಾಲೇಜು. | 2001.00 |
| 3245. | ಶ್ರೀ ಕೆ.ಎಸ್.ತೋಂಟದಾರ್ಯ, ಸ.ಶಿ. ಡಿಟ್ಟೋ ಕಾಲೇಜು. | 2001.00 |
| 3246. | ಶ್ರೀ ಸಿ. ಅಶ್ವತ್ಥಪ್ಪ, ಸ.ಶಿ. ಡಿಟ್ಟೋ ಕಾಲೇಜು. | 2001.00 |
| 3247. | ಶ್ರೀ ರಾಮಕೃಷ್ಣ ಸ.ಶಿ. ಡಿಟ್ಟೋ ಕಾಲೇಜು. | 2001.00 |
| 3248. | ಶ್ರೀ ಎಲ್.ಶಿವಕುಮಾರ್, ಸ.ಶಿ. ಡಿಟ್ಟೋ ಕಾಲೇಜು. | 2001.00 |
| 3250. | ಶ್ರೀ ಎಲ್.ಎ. ಶಿವಣ್ಣ, ಸ.ಶಿ. ಡಿಟ್ಟೋ ಕಾಲೇಜು. | 2001.00 |
| 3251. | ಶ್ರೀ ಎಸ್. ರುದ್ರಮೂರ್ತಿ, ಪ್ರ.ದ.ಸ. ಡಿಟ್ಟೋ ಕಾಲೇಜು. | 2001.00 |
| 3252. | ಶ್ರೀ ಹೆಚ್.ರುದ್ರೇಶಯ್ಯ, ಗ್ರೂಫ್ 'ಡಿ' ನೌಕರ ಡಿಟ್ಟೋ ಕಾಲೇಜು. | 2001.00 |
| 3253. | ಶ್ರೀ ಬಸವರಾಜು (ಹಳೇಮಠ) ಹಿಂ.ಶಿ. ಶ್ರೀ.ಬಾ.ಕೇಂ. ಪ್ರೌ.ಶಾಲೆ, ಮಾಚೇನಹಳ್ಳಿ, ತುರುವೇಕೆರೆ ತಾ. | 2001.00 |
| 3254. | ಶ್ರೀ ಎನ್.ವೆಂಕಟೇಶಯ್ಯ, ಸ.ಶಿ. ಶ್ರೀ.ಸಿ.ಹಿ.ಪ್ರಾ.ಶಾಲೆ, ಶಿವನಗರ, ಬೆಂಗಳೂರು. | 2001.00 |
| 3255. | ಶ್ರೀ ಎ. ನಂಜುಂಡಪ್ಪ 1ನೇ ಮುಖ್ಯರಸ್ತೆ, ಯಶವಂತಪುರ, ಬೆಂಗಳೂರು. | 2000.00 |
| 3256. | ಶ್ರೀ ಜಿ.ಡಿ. ಮಹದೇವಯ್ಯ ದೈ.ಶಿ.ಶಿ., ಶ್ರೀ.ವೀ.ಹಿ.ಪ್ರಾ.ಶಾಲೆ, ಅಗ್ರಹಾರ ದಾಸರಹಳ್ಳಿ, ಬೆಂಗಳೂರು. | 2001.00 |
| 3257. | ಶ್ರೀ ಶಾಪ್ ಪುಟ್ಟಣ್ಣ ಮತ್ತು ಯಶೋಧಮ್ಮನವರ ಮಕ್ಕಳು ಶಾಪ್ ಸಿದ್ದೇಗೌಡ ಅಂಡ್ ಕೋ. ಬಿ.ಎಂ. ರಸ್ತೆ, ಸಕಲೇಶಪುರ, ಹಾಸನ | 1100.00 |
| 3258. | ಶ್ರೀ ಆರ್. ಕೃಷ್ಣಮೂರ್ತಿ ಪ್ರಭಾರಿ ಮುಖ್ಯಶಿಕ್ಷಕರು ಶ್ರೀ ವೀರಭದ್ರಸ್ವಾಮಿ ಹಿ.ಪ್ರಾ.ಶಾಲೆ, ಅಗ್ರಹಾರ ದಾಸರಹಳ್ಳಿ, ಬೆಂಗಳೂರು. | 1001.00 |
| 3260. | ಶ್ರೀ ಎನ್. ಅಶ್ವತ್ಥನಾರಾಯಣ ಸ.ಶಿ. ಶ್ರೀ.ವೀ.ಹಿ.ಪ್ರಾ.ಶಾಲೆ, ಅಗ್ರಹಾರ ದಾಸರಹಳ್ಳಿ, ಬೆಂಗಳೂರು. | 1001.00 |
| 3261. | ಶ್ರೀ ಜಿ.ಮೋಹನ್‌ಕುಮಾರ್, ಸ.ಶಿ. ಶ್ರೀ.ವೀ.ಹಿ.ಪ್ರಾ.ಶಾಲೆ, ಅಗ್ರಹಾರ ದಾಸರಹಳ್ಳಿ, ಬೆಂಗಳೂರು. | 1001.00 |
| 3262. | ಶ್ರೀ ಎಸ್.ಬಿ. ಶಿವಪ್ರಕಾಶ್, ಬಿ.ಇ. ಸಿಲ್ವರ್ ಪ್ಯಾಲೇಸ್ ಅಪಾರ್ಟ್‌ಮೆಂಟ್, ವಸಂತನಗರ, ಬೆಂಗಳೂರು. | 5001.00 |
| 3263. | ಶ್ರೀ ರುಶೀಲ್ ಬಿನ್ ಪ್ರಕಾಶ್ 1ಬ್ಲಾಕ್. ರಾಜಾಜಿನಗರ, ಬೆಂಗಳೂರು. | 5001.00 |
| 3264. | ಶ್ರೀ ರಿಷಿಕ ಬಿನ್ ಕೆ.ಪ್ರಕಾಶ್ 1ಬ್ಲಾಕ್. ರಾಜಾಜಿನಗರ, ಬೆಂಗಳೂರು. | 5001.00 |
| 3265. | ಶ್ರೀ ಒನಿತಕುಂಟೆ ಬಸವನಗೌಡ ಮತ್ತು ಕುಟುಂಬ ವರ್ಗ ಪಾರ್ವತಿ ನಗರ, ಸಿರಗುಪ್ಪ, ಬಳ್ಳಾರಿ ಜಿಲ್ಲೆ. | 2101.00 |
| 3266. | ಶ್ರೀ ಎನ್. ಶ್ರೀನಿವಾಸ್ ಹೆಸರಘಟ್ಟ ರಸ್ತೆ, ಬೆಂಗಳೂರು. | 5001.00 |
| 3267. | ಶ್ರೀ ಡಿ.ಧನಪಾಲನಾಯಕ್, ಉಪನ್ಯಾಸಕರು, ಶ್ರೀ.ಸಿ.ಪ.ಪೂ. ಕಾಲೇಜು, ಬಿ.ಎಚ್.ರಸ್ತೆ, ತುಮಕೂರು. | 2000.00 |
| 3268. | ಶ್ರೀ ಡಿ.ಶ್ರೀಕಾಂತ್, ದ್ವಿ.ದ.ಸ. ಶ್ರೀ.ಸಿ.ಪ.ಪೂ.ಕಾಲೇಜು, ಬಿ.ಎಚ್.ರಸ್ತೆ, ತುಮಕೂರು. | 1500.00 |
| 3269. | ಶ್ರೀ ಟಿ.ಸಿ. ಶಿವಕುಮಾರ್ ಸ.ಶಿ. ಶ್ರೀ.ಜ.ರೇ.ಸಿ.ಗ್ರಾ.ಪ್ರೌ.ಶಾಲೆ, ಮಾಗಡಿ ತಾ., ಬೆಂ.ಗ್ರಾ.ಜಿಲ್ಲೆ. | 1000.00 |
| 3270. | ಶ್ರೀ ಡಿ.ಪಿ.ಸಿದ್ದಲಿಂಗಯ್ಯ, ದ್ವಿ.ದ.ಸ.ಶ್ರೀ.ಜ.ರೇ.ಸಿ.ಗ್ರಾ.ಪ್ರೌ.ಶಾಲೆ, ಮಾಗಡಿ ತಾ., ಬೆಂ.ಗ್ರಾ.ಜಿಲ್ಲೆ. | 1000.00 |
| 3271. | ಶ್ರೀ ಎಂ.ಎಸ್. ರಾಜಣ್ಣ, ಸೇವಕ ಡಿಟ್ಟೋ ಶಾಲೆ. | 2001.00 |
| 3272. | ಶ್ರೀ ಪರಮಶಿವಯ್ಯ, ಸೇವಕ ಡಿಟ್ಟೋ ಶಾಲೆ. | 2001.00 |
| 3273. | ಶ್ರೀ ಸಿ.ವಿ.ಲೋಕೇಶ್, ಸ.ಶಿ. ಡಿಟ್ಟೋ ಶಾಲೆ. | 2001.00 |
| 3274. | ಶ್ರೀ ಚಂದ್ರಶೇಖರಯ್ಯ, ಶಿಕ್ಷಕರು, ಕದರನಹಳ್ಳಿ, ಕುರುಡಿ ಅಂಚೆ, ಗೌ.ಬಿ. ತಾ. ಕೋಲಾರ ಜಿ. | 800.00 |
| 3275. | ಶ್ರೀಮತಿ ಹೊನ್ನಮ್ಮ ಚಂದ್ರಯ್ಯ ಕೇರಾಫ್ ಎಸ್.ಎಂ.ಜಯಣ್ಣ ಸುಂದರಕುಪ್ಪೆ, ಕುಣಿಗಲ್ ತಾ. ತುಮಕೂರು ಜಿ. | 2001.00 |
| 3276. | ಶ್ರೀ ಎನ್. ರಂಗೇಗೌಡ ದೇವಕುಮಾರಿ ಮತ್ತು ಮಕ್ಕಳು ದಿ. ಎನ್.ರಂಗೇಗೌಡ ಇವರ ಸ್ಮರಣಾರ್ಥ 4ನೇ ಬ್ಲಾಕ್, ಬಸವೇಶ್ವರ ನಗರ, ಬೆಂಗಳೂರು. | 2001.00 |
| 3277. | ಶ್ರೀ ಈ.ಎಸ್. ಕಿರೆಸೂರ್ ಆರ್.ಪಿ.ಸಿ. ಲೇಔಟ್, ವಿಜಯನಗರ 2ನೇ ಸ್ಟೇಜ್, ಬೆಂಗಳೂರು | 1001.00 |
| 3278. | ಶ್ರೀ ಸಿ.ಬಸವರಾಜು 1ನೇ ಮೈನ್, ವಿಜಯನಗರ, ಬೆಂಗಳೂರು | 1001.00 |
| 3279. | ಶ್ರೀ ಎಂ.ಆರ್. ನಟರಾಜ್, ರಿ.ಇಂಜಿನಿಯರ್ ಮಾರುತಿನಗರ, ಅರಸೀಕೆರೆ, ಹಾಸನ ಜಿಲ್ಲೆ. | 2001.00 |





| ಕ್ರ.ಸಂ. | ಹೆಸರು ಮತ್ತು ವಿಳಾಸ | ಮೊತ್ತ |
|---|---|---|
| 3280. | ಶ್ರೀ ಕೆ.ಪಿ.ಸಿದ್ಧಲಿಂಗಯ್ಯ, ಸೀನಿಯರ್ ಅಸಿಸ್ಟೆಂಟ್, ರಾಮನಗರ, ಬೆಂಗಳೂರು ಗ್ರಾ.ಜಿಲ್ಲೆ. 1ನೆ ಕಂತು | 1001.00 |
| 3281. | ಶ್ರೀ ವೀರಣ್ಣಶೆಟ್ಟಿ, ದೈ.ಶಿ.ಶಿಕ್ಷಕರು, ಶ್ರೀ.ಸ್ವಾ.ವಿ.ಪ್ರೌ.ಶಾಲೆ, ಕುಪ್ಪೂರು, ಚಿ.ನಾ.ಹಳ್ಳಿ ತಾ, ತುಮಕೂರು ಜಿ. | 2000.00 |
| 3282. | ಶ್ರೀ ಗೋವಿಂದರಾಜು, ಸೇವಕರು, ಶ್ರೀ.ಸ್ವಾ.ವಿ.ಪ್ರೌ.ಶಾಲೆ, ಕುಪ್ಪೂರು, ಚಿ.ನಾ.ಹಳ್ಳಿ ತಾ, ತುಮಕೂರು ಜಿ. | 2000.00 |
| 3283. | ಶ್ರೀ ಸಿದ್ಧಗಂಗಾ ಮಹಿಳಾ ಪದವಿಪೂರ್ವ ಕಾಲೇಜು, ಹೆಚ್.ರಸ್ತೆ, ತುಮಕೂರು. | 3000.00 |
| 3284. | ಶ್ರೀ ಎಂ. ಗಜೇಂದ್ರಕುಮಾರ್ ಬಿನ್ ಮಹದೇವಯ್ಯ ನಾಗರಭಾವಿ, 2ನೇ ಸ್ಟೇಜ್, ಬೆಂಗಳೂರು. | 2001.00 |
| 3285. | ಶ್ರೀಮತಿ ಎಸ್.ಎನ್, ಮಂಜುಳ ಮತ್ತು ಸಿ. ಪರಮೇಶ್ವರಪ್ಪ 5ನೇ ಬ್ಲಾಕ್, ರಾಜಾಜಿನಗರ, ಬೆಂಗಳೂರು. 2ನೇ ಕಂತು | 1001.00 |
| 3286. | ಶ್ರೀ ಟಿ.ಎನ್. ಸರಸ್ವತಿ, ಕಾಫಿ ಪ್ಲಾಂಟರ್, ಐಗೂರು @ಪೋಸ್ಟ್, ಸಕಲೇಶಪುರ, ಹಾಸನ ಜಿ. | 1000.00 |
| 3287. | ಶ್ರೀ ಎಂ.ಸಿ. ಬಸಪ್ಪ, ಬಸಮ್ಮ, ಕಾಫಿ ಬೆಳೆಗಾರರು ಮಳಗಳಲೆ, ಆಲೂರು ತಾ, ಹಾಸನ ಜಿಲ್ಲೆ. | 2001.00 |
| 3288. | ಶ್ರೀ ಈಶ್ವರಪ್ಪ, ಶ್ರೀ ಸಿದ್ಧಗಂಗಾ ಟ್ರೇಡಿಂಗ್ ಕಂಪನಿ, ಎ.ಪಿ.ಎಂ.ಸಿ. 0ಯಾರ್ಡ್, ಗಜೇಂದ್ರ ಗಡ, ಗದಗ. | 1001.00 |
| 3289. | ಶ್ರೀ ಇ.ಜಿ. ಜಯಮ್ಮ ವಿಜಯನಗರ 2ನೇ ಸ್ಟೇಜ್, ಬೆಂಗಳೂರು. | 1001.00 |
| 3290. | ಶ್ರೀ ದಾಳಪ್ಪ ವರ್ಕ ಷಾಪ್ ಸೂಪರಿಂಟೆಂಡ್ ಲಿಂ. ಶ್ರೀಮತಿ ಸಾಕಮ್ಮ ಇವರ ಸ್ಮರಣಾರ್ಥ ಪೀಣ್ಯ, 2ಸ್ಟೇಜ್, ಬೆಂಗಳೂರು. | 2001.00 |
| 3291. | ಶ್ರೀ ನರಸಿಂಹಮೂರ್ತಿ ದ್ವಿ.ದ.ಸ. ಶ್ರೀ.ಸು. ಪ್ರೌ.ಶಾಲೆ ಮಲ್ಲೇಕಾವು, ಕೊರಟಗೆರೆ ತಾ., ತುಮಕೂರು ಜಿ. | 1001.00 |
| 3292. | ಶ್ರೀ ಬಿ.ಚಂದ್ರಯ್ಯ, ಸ.ಶಿ. ಶ್ರೀ.ಸಿ.ಗ್ರಾ. ಪ್ರೌ.ಶಾಲೆ, ನಾರಸಂದ್ರ, ಮಾಗಡಿ ತಾ., | 1001.00 |
| 3293. | ಶ್ರೀಮತಿ ಉಮಾಮಹೇಶಯ್ಯ ಬಿನ್ ತಗಡೂರು ವೀರಭದ್ರಪ್ಪ ಶಾಂತಿನಗರ, ತುಮಕೂರು. | 1001.00 |
| 3294. | ಶ್ರೀ ವೈ.ಎಂ. ಮಹದೇವಮ್ಮ ಕೋಂ. ಲಿಂ.ಚಂದ್ರಶೇಖರಸ್ವಾಮಿ ಪ್ರೊ. ಎಸ್.ಎಲ್. ಸಾ ಮಿಲ್ ಮತ್ತು ರೈಸ್ ಮಿಲ್ ಟಿ. ನರಸೀಪುರ ತಾ., | 2100.00 |
| 3295. | ಶ್ರೀ ಆರ್. ರುದ್ರಾರಾಧ್ಯ, ಉಪನ್ಯಾಸಕರು, ಶ್ರೀ ಸಿದ್ಧಗಂಗಾ ಶಿಕ್ಷಣ ವಿದ್ಯಾಲಯ, ಬಿ.ಹೆಚ್.ರಸ್ತೆ, ತುಮಕೂರು. | 1776.00 |
| 3296. | ಶ್ರೀಮತಿ ಜಿ.ಬಿ.ದೇವಮ್ಮ, ಉಪನ್ಯಾಸಕರು, ಡಿಟ್ಟೋ ಕಾಲೇಜು. | 1776.00 |
| 3297. | ಶ್ರೀಮತಿ ಆರ್.ಗಿರಿಜಾ, ಉಪನ್ಯಾಸಕರು, ಡಿಟ್ಟೋ ಕಾಲೇಜು. | 1776.00 |
| 3298. | ಶ್ರೀ ಜಗದೀಶ್‌ಕುಮಾರ್, ಉಪನ್ಯಾಸಕರು, ಡಿಟ್ಟೋ ಕಾಲೇಜು. | 1656.00 |
| 3299. | ಶ್ರೀ ಜಿ.ವಿ. ಶೋಭಾ, ಉಪನ್ಯಾಸಕರು, ಡಿಟ್ಟೋ ಕಾಲೇಜು. | 2326.00 |
| 3300. | ಶ್ರೀ ಪಿ. ಶಂಭುಲಿಂಗಸ್ವಾಮಿ, ಉಪನ್ಯಾಸಕರು, ಡಿಟ್ಟೋ ಕಾಲೇಜು. | 1440.00 |
| 3301. | ಶ್ರೀಮತಿ ಶಾಂತಮ್ಮ, ಉಪನ್ಯಾಸಕರು, ಡಿಟ್ಟೋ ಕಾಲೇಜು. | 1440.00 |
| 3302. | ಶ್ರೀ ಆರ್. ವೀರಭದ್ರಯ್ಯ, ಲೈಬ್ರರಿಯನ್ ಡಿಟ್ಟೋ ಕಾಲೇಜು. | 2122.00 |
| 3303. | ಶ್ರೀ ಬಿ.ಶಿವಣ್ಣ, ಪ್ರ.ದ.ಸ. ಡಿಟ್ಟೋ ಕಾಲೇಜು. | 1644.00 |
| 3304. | ಶ್ರೀ ಎಂ.ಎಸ್. ಬಸವರಾಜು, ದ್ವಿ.ದ.ಸ. ಡಿಟ್ಟೋ ಕಾಲೇಜು. | 1368.00 |
| 3305. | ಶ್ರೀ ಕೆ.ಎಸ್. ಸತೀಶ್ ಡಿಟ್ಟೋ ಕಾಲೇಜು. | 720.00 |
| 3306. | ಶ್ರೀ ಜಯಕುಮಾರ್, ಡಿಟ್ಟೋ ಕಾಲೇಜು. | 1333.00 |
| 3307. | ಶ್ರೀ ಈ. ಗುರುಶಾಂತಯ್ಯ ಡಿಟ್ಟೋ ಕಾಲೇಜು. | 1333.00 |
| 3308. | ಶ್ರೀ ಸಾಂಬಶಿವಯ್ಯ, ಡಿಟ್ಟೋ ಕಾಲೇಜು. | 1308.00 |
| 3309. | ಶ್ರೀ ಎಸ್.ಎ. ಬಸವರಾಜು ಡಿಟ್ಟೋ ಕಾಲೇಜು. | 810.00 |
| 3310. | ಶ್ರೀ ರಾಜಣ್ಣ ಡಿಟ್ಟೋ ಕಾಲೇಜು. | 678.00 |
| 3311. | ಶ್ರೀ ಪಿ.ಎಂ. ಮಹಲಿಂಗಪ್ಪ, ಉಪನ್ಯಾಸಕರು ಡಿಟ್ಟೋ ಕಾಲೇಜು. | 669.00 |
| 3312. | ಶ್ರೀ ಆರ್. ಶಿವಯ್ಯ, ಎಲ್.ಎನ್. ಕಾಲೋನಿ, ಯಶವಂತಪುರ, ಬೆಂಗಳೂರು. | 5001.00 |
| 3313. | ಶ್ರೀ ಸುದೀಶ್‌ಪ್ರಭು ಜಯಲಕ್ಷ್ಮಿ ಪುರಂ, 2ನೇ ಬ್ಲಾಕ್, ಮೈಸೂರು. | 2001.00 |
| 3314. | ಶ್ರೀ ಟಿ.ಕೆ. ರಂಗನಾಥ, ಸ.ಶಿ. ಶ್ರೀ.ಸಿ.ಗ್ರಾ.ಪ್ರೌ.ಶಾಲೆ, ತರೂರು, ಶಿರಾ ತಾಲ್ಲೂಕು. | 2001.00 |
| 3315. | ಶ್ರೀ ಡೈರಿ ಚಿಕ್ಕಣ್ಣ, ಸರ್.ಎಂ.ವಿ. ಬಡಾವಣೆ, ಹೊಸಕೋಟೆ, ಬೆಂಗಳೂರು. | 5001.00 |
| 3316. | ಶ್ರೀ ಸಿ. ಬಸವರಾಜು ಬಿ.ಸಿ.ಸಿ. ಲೇಔಟ್, ವಿಜಯನಗರ, ಬೆಂಗಳೂರು. | 4000.00 |
| 3317. | ಶ್ರೀ ಬಿ.ಎ. ಪರಮಶಿವಯ್ಯ, ಪಾಲುದಾರರು, ಶ್ರೀ ಶಿವಾನಂದ ಸ್ಟೋರ್ಸ್, ಕುಮಾರಪಾರ್ಕ್(ಈಸ್ಟ್) ಬೆಂ., | 5001.00 |
| 3318. | ಶ್ರೀಮತಿ ಗಂಗಮ್ಮ, 'ಸಿ' ಸ್ಟ್ರೀಟ್, ಮಲ್ಲೇಶ್ವರಂ, ಬೆಂಗಳೂರು. | 5001.00 |
| 3319. | ಶ್ರೀ ಟಿ.ಎಸ್. ನಾಗರಾಜ, ಡೆಪ್ಯುಟಿ ಮ್ಯಾನೇಜರ್, ಸ್ಟೇಟ್ ಬ್ಯಾಂಕ್ ಆಫ್ ಮೈಸೂರು, (ಹೆಡ್.ಓ)ಬೆಂಗಳೂರು. | 3005.00 |
| 3320. | ಡಾ|| ಮಂಜುನಾಥ್ ಆರ್. ಬನ್ನೂರ್ ಮುನ್ಸಿಪಲ್ ವಸತಿ ಗೃಹ, ಶಿರಹಟ್ಟಿ ತಾ., ಗದಗ ಜಿಲ್ಲೆ, | 2001.00 |
| 3321. | ಶ್ರೀಮತಿ ಶಶಿಕಲಾ ದಕ್ಷಿಣಾಮೂರ್ತಿ ಚನ್ನಬಸವೇಶ್ವರ ನಗರ, ಉಪ್ಪಾರಹಳ್ಳಿ, ತುಮಕೂರು. | 1000.00 |

| ಕ್ರ.ಸಂ. | ಹೆಸರು ಮತ್ತು ವಿಳಾಸ | ಮೊತ್ತ |
|---|---|---|
| 3322. | ಶ್ರೀ ಕೆ.ಆರ್. ಶರ್ಮ, ಜಯನಗರ, 7ನೇ ಬ್ಲಾಕ್, ಬೆಂಗಳೂರು. | 1000.00 |
| 3323. | ಶ್ರೀ ಜಿ.ಎಲ್. ಮಂಜುನಾಥ್, ಸರಸ್ವತಿನಗರ, 15ಕ್ರಾಸ್, ವಿಜಯನಗರ, ಬೆಂಗಳೂರು. | 2001.00 |
| 3324. | ಶ್ರೀ ಹೆಚ್.ಆರ್. ನಾಗಭೂಷಣ ಹೆತ್ತೂರ್ ಅಂ., ಸಕಲೇಶಪುರ ತಾ., ಹಾಸನ ಜಿ. | 2001.00 |
| 3325. | ಶ್ರೀ ಬಿ.ಎಸ್.ದೊಡ್ಡವೀರಯ್ಯ, ಕನಕಪುರ, ಬೆಂಗಳೂರು ಗ್ರಾ.ಜಿಲ್ಲೆ. | 5000.00 |
| 3326. | ಶ್ರೀ ಬಿ.ಎಸ್. ಶಿವಕಲ್ಪನಕುಮಾರ್ ಪಟ್ಟಣಗೆರೆ, ರಾಜರಾಜೇಶ್ವರಿ ನಗರ, ಬೆಂಗಳೂರು. | 2102.00 |
| 3327. | ಶ್ರೀ ಅಪ್ಪಯ್ಯಶೆಟ್ಟಿ, ಎಸ್.ಡಿ.ಎ. ಶ್ರೀ.ಸಿ.ಗ್ರಾ.ಪ್ರೌ.ಶಾಲೆ, ಗುಡೇಮಾರನಹಳ್ಳಿ, ಮಾಗಡಿ ತಾ., ಬೆಂಗಳೂರು ಗ್ರಾ.ಜಿ. | 2000.00 |
| 3328. | ಶ್ರೀ ಬಸವರಾಜ್ ವೆಂಕಪ್ಪ ಹರಕುರಿ, ಅಟ್ಟಿಗೆರೆ ಅಂಚೆ, ಶಿಗ್ಗಾಂವ ತಾ, ಹಾವೇರಿ ಜಿಲ್ಲೆ. | 2001.00 |
| 3329. | ಡಾ॥ ವೆಂಕಟಸ್ವಾಮಿ ರೆಡ್ಡಿ ಬನಶಂಕರಿ, 1ನೇ ಹಂತ, ಬೆಂಗಳೂರು. | 5001.00 |
| 3330. | ಶ್ರೀ ಎನ್.ಪಿ.ಸದಾಶಿವಪ್ಪ, ಶಿಕ್ಷಕರು, ನಿವೇದಿತಾ ಪ್ರೌಢಶಾಲೆ, ಕ್ಯಾತ್ಸಂದ್ರ, ತುಮಕೂರು. | 2001.00 |
| 3331. | ಶ್ರೀ ಎಂ. ಶಾಂತಮೂರ್ತಿ, ಉಪನ್ಯಾಸಕರು, ಶ್ರೀ ಸಿದ್ಧಗಂಗಾ ಪಾರ್ಮಸಿ ಕಾಲೇಜು, ತುಮಕೂರು. | 3345.00 |
| 3332. | ಶ್ರೀ ಕೆ.ಸಿ. ಪ್ರಶಾಂತ್‌ಕುಮಾರ್, ಉಪನ್ಯಾಸಕರು, ಶ್ರೀ ಸಿದ್ಧಗಂಗಾ ಪಾರ್ಮಸಿ ಕಾಲೇಜು, ತುಮಕೂರು. | 3074.00 |
| 3333. | ಶ್ರೀ ಡಿ.ಎನ್. ಗುರುಪ್ರಸಾದ್, ಉಪನ್ಯಾಸಕರು, ಶ್ರೀ ಸಿದ್ಧಗಂಗಾ ಪಾರ್ಮಸಿ ಕಾಲೇಜು, ತುಮಕೂರು. | 832.00 |
| 3334. | ಶ್ರೀ ಎನ್.ವಿ.ಸತೀಶ್‌ಕುಮಾರ್, ಗ್ರಂಥಾಲಯ ಸಹಾಯಕರು, ಶ್ರೀ ಸಿದ್ಧಗಂಗಾ ಪಾರ್ಮಸಿ ಕಾಲೇಜು, ತುಮಕೂರು. | 1509.00 |
| 3335. | ಶ್ರೀ ಎ.ಹೆಚ್. ಪ್ರಸನ್ನಕುಮಾರ್, ಶ್ರೀ ಸಿದ್ಧಗಂಗಾ ಗ್ರಾ. ಪ್ರೌ. ಹೆಡಕನಹಳ್ಳಿ, ಹೊಸಕೋಟೆ ತಾ॥, ಬೆಂಗಳೂರು ಗ್ರಾ.ಜಿ. | 2001.00 |
| 3336. | ಶ್ರೀ ಎಸ್. ಶ್ರೀನಿವಾಸನಾಯಕ, ಯಲಹಂಕ ನ್ಯೂ ಟೌನ್, ಬೆಂಗಳೂರು. | 5000.00 |
| 3337. | ಮುಖ್ಯ ಶಿಕ್ಷಕರು, ಸಿಬ್ಬಂದಿ ವರ್ಗ ಮತ್ತು ವಿದ್ಯಾರ್ಥಿಗಳು ನಿವೇದಿತಾ ಪ್ರೌಢಶಾಲೆ, ಕ್ಯಾತ್ಸಂದ್ರ, ತುಮಕೂರು. | 5001.00 |
| 3338. | ಶ್ರೀ ಬಾಳಗಂಗಾಧರಯ್ಯ, ಬಿನ್ ಕೆ.ಸಿದ್ಧಲಿಂಗಯ್ಯ, ನಿಡವಂದ ಅಂ., ನೆಲಮಂಗಲ ತಾ, ಬೆಂಗಳೂರು. | 500.00 |
| 3339. | ಶ್ರೀ ಶಾಂತಕುಮಾರಿ, ಲಿಂ.ಸೋಮೇಲಿಂಗಯ್ಯ ಇವರ ಸ್ಮರಣಾರ್ಥ ಜೆ.ಪಿ. ನಗರ, ಕನಕಪುರ ರಸ್ತೆ, ಬೆಂಗಳೂರು. | 1000.00 |
| 3340. | ಶ್ರೀ ಜಿ. ಕರಿಸಿದ್ದಯ್ಯ, ನಿ. ತಹಶೀಲ್ದಾರರು, ರೈಲ್ವೆ ಸ್ಟೇಷನ್ ರಸ್ತೆ, ತಿಪಟೂರು, ತುಮಕೂರು ಜಿ. | 2001.00 |
| 3341. | ಶ್ರೀ ವಿ.ಎಸ್. ನೀಲಕಂಠಾರಾಧ್ಯ, ಸಹಶಿಕ್ಷಕರು, ಶ್ರೀ.ಸಿ.ಸ.ಪ್ರೌ. ಶಾಲೆ, ಶ್ರೀ ಸಿದ್ಧಗಂಗಾ ಮಠ, ತುಮಕೂರು. | 2001.00 |
| 3342. | ಶ್ರೀ ಎಸ್. ಮಲ್ಲೇಶ್, ಸಹಶಿಕ್ಷಕರು, ಡಿಟೋ ಶಾಲೆ | 2001.00 |
| 3343. | ಶ್ರೀ ಜಿ.ಎಸ್. ರುದ್ರಪ್ಪ, ಸಹಶಿಕ್ಷಕರು, ಡಿಟೋ ಶಾಲೆ | 2001.00 |
| 3344. | ಶ್ರೀ ಡಿ. ಶಿವಮೂರ್ತಿ, ಸಹಶಿಕ್ಷಕರು, ಡಿಟೋ ಶಾಲೆ | 2001.00 |
| 3345. | ಶ್ರೀ ಕೆ.ಎಂ. ಲೋಕೇಶ್ ಮತ್ತು ಭವ್ಯ ವಿಜಯನಗರ 2ನೇ ಸ್ಟೇಜ್, ಮೈಸೂರು. | 2001.00 |
| 3346. | ಶ್ರೀ ಬಿ.ಎಂ. ಗೌರಪ್ಪ ಬಿ.ಆರ್.ಎಲ್. ಲೇಔಟ್, ವಿದ್ಯಾರಣ್ಯಪುರ, ಬೆಂಗಳೂರು. | 2001.00 |
| 3347. | ಶ್ರೀ ಎಂ.ಕೆ. ಪಾಲನೇತ್ರಯ್ಯ, ದೈ.ಶಿ.ಶಿ., ಶ್ರೀ. ಸಿ.ಸ.ಉ.ಪ್ರಾ. ಶಾಲೆ, ಶ್ರೀ ಸಿದ್ಧಗಂಗಾ ಮಠ, ತುಮಕೂರು. | 2001.00 |
| 3348. | ಶ್ರೀ ಹೆಚ್.ಮುನಿರಾಜು. ಸ. ಶಿ., ಶ್ರೀ. ಸಿ.ಸ.ಉ.ಪ್ರಾ. ಶಾಲೆ, ಶ್ರೀ ಸಿದ್ಧಗಂಗಾ ಮಠ, ತುಮಕೂರು. | 2001.00 |
| 3349. | ಶ್ರೀಮತಿ ಎಂ. ಶಿವಮ್ಮ, ಸಹಶಿಕ್ಷಕರು, ಶ್ರೀ. ಸಿ.ಸ.ಉ.ಪ್ರಾ. ಶಾಲೆ, ಶ್ರೀ ಸಿದ್ಧಗಂಗಾ ಮಠ, ತುಮಕೂರು. | 2001.00 |
| 3350. | ಶ್ರೀ ಎಸ್.ಬಿ. ಬಂಗಾರಿ, ಮಹಾಂತೇಶನಗರ, ಮುದ್ದೇಬಿಹಾಳ ತಾ., ವಿಜಾಪುರ ಜಿಲ್ಲೆ. | 2001.00 |
| 3351. | ಶ್ರೀಮತಿ ಆರ್.ಎಸ್.ನಾಗರತ್ನ ಮತ್ತು ಶ್ರೀ ಆರ್.ಎಂ. ಚಂದ್ರಪ್ಪ, ರಾಮಗೊಂಡನಹಳ್ಳಿ, ತುಮಕೂರು ಜಿಲ್ಲೆ. | 7777.00 |
| 3352. | ಶ್ರೀ ಬಾಲಗಂಗಾಧರಯ್ಯ, ಬಿನ್ ಕೆ.ಸಿದ್ಧಲಿಂಗಯ್ಯ ತಟ್ಟೆಕೆರೆ ನಿಡವಂದ ಅಂ. ನೆಲಮಂಗಲ ತಾ. | 1500.00 |
| 3353. | ಶ್ರೀ ಕೆ.ಎಸ್. ಕಿರಣ್‌ಕುಮಾರ್, ಶಾಸಕರು, ಕಳ್ಳಂಬೆಳ್ಳ ಕ್ಷೇತ್ರ, ಹುಳಿಯಾರ್, ತುಮಕೂರು | 2000.00 |
| 3354. | ಶ್ರೀ ಕೆ.ದಿವಾಕರ್, ಶ್ರೀ ವಿನಾಯಕ ಆಟೋ ಕನ್ಸಲ್ಟೆಂಟ್ಸ್, ಬೃಂದಾವನ್ ನಗರ್, ಬೆಂಗಳೂರು. | 501.00 |
| 3355. | ಡಾ॥ ಶ್ರೀಕಂಠಯ್ಯ.ಲಿಂ. ಎಂ.ಸುಶೀಲ ಇವರ ಸ್ಮರಣಾರ್ಥ ವೆಸ್ಟ್ ಆಫ್ ಕಾರ್ಡ್ ರಸ್ತೆ, ಮಹಾಗಣಪತಿನಗರ, ಬೆಂಗಳೂರು. | 2001.00 |
| 3356. | ಶ್ರೀ ಕೆ.ಜಿ. ಶಿವಣ್ಣ ಎಂ.ಆರ್.ಸಿ.ಆರ್ ಲೇಔಟ್, ವಿಜಯನಗರ, ಬೆಂಗಳೂರು. | 2001.00 |
| 3357. | ಶ್ರೀ ಅಪ್ಪಯ್ಯಶೆಟ್ಟಿ, ದ್ವಿ.ದ.ಸ. ಶ್ರೀ.ಸಿ.ಗ್ರಾ.ಪ್ರೌ.ಶಾಲೆ, ಗುಡೇಮಾರನಹಳ್ಳಿ, ಮಾಗಡಿ ತಾ. ಬೆಂ.ಗ್ರಾ.ಜಿಲ್ಲೆ. | 1000.00 |
| 3358. | ಶ್ರೀ ಬಿ.ಎಸ್. ಜಗದಾಂಬ ಮತ್ತು ಬಸವರಾಜ ಕೇರಾಫ್ ಬಿ. ಕರಿಬಸಪ್ಪ ಜನರಲ್ ಮರ್ಚೆಂಟ್ಸ್, ತಾವರೆಕೆರೆ, ಮಾಗಡಿ ಮುಖ್ಯರಸ್ತೆ, ನೆಲಮಂಗಲ ತಾ, ಬೆಂ.ಗ್ರಾ.ಜಿಲ್ಲೆ. | 5001.00 |
| 3359. | ಶ್ರೀ ಕರ್ನಾಟಕ ಕ್ಷತ್ರಿಯ ಮರಾಠ ಪರಿಷತ್, ಸೆಂಟ್ರಲ್ ಆಫೀಸ್, ತಿಮ್ಮಯ್ಯ ರಸ್ತೆ, ವಸಂತನಗರ, ಬೆಂಗಳೂರು. | 5000.00 |
| 3360. | ಡಾ॥ ಮಂಜುನಾಥ್ ಆರ್. ಬನ್ನೂರ್, ಲಕ್ಷ್ಮೇಶ್ವರ, ಶಿರಹಟ್ಟಿ ತಾ., ಗದಗ ಜಿಲ್ಲೆ. | 1000.00 |
| 3361. | ಕು॥ ಜಿ.ಆರ್. ಸೌಮ್ಯ ಬಿನ್ ರಾಜಶೇಖರಯ್ಯ, ಟಿ.ಜಿ.ಬಡಾವಣೆ, ಹೊಸಕೋಟೆ, ಬೆಂ.ಗ್ರಾ.ಜಿಲ್ಲೆ. | 2501.00 |
| 3362. | ಶ್ರೀ ಬಿ.ಎಸ್. ಶಿವಕಲ್ಪನಕುಮಾರ, ಪಟ್ಟಣಗೆರೆ, ಆರ್.ಆರ್. ನಗರ, ಬೆಂಗಳೂರು. | 1101.00 |
| 3363. | ಶ್ರೀ ಎಸ್.ಎಂ. ಕಾಂತರಾಜು, ಹಿಂದಿ ಉಪನ್ಯಾಸಕರು, ಎಸ್.ಎಸ್.ಪಿ.ಯು. ಕಾಲೇಜು, ತುರುವೇಕೆರೆ. | 2000.00 |

*(ಮುಂದುವರಿಯುತ್ತದೆ)* *

RNI No. 17139/69 "Siddaganga" Monthly - Postal Reg. No. KA/SK/TMR/385/2006-08



ಪೂಜ್ಯ ಶ್ರೀ ಶ್ರೀಗಳವರು ತುಮಕೂರಿನಲ್ಲಿ ಜರುಗಿದ ಶ್ರೀ ದಿಗಂಬರ ಜೈನಮುನಿ ತರುಣ ಸಾಗರ ಮಹಾರಾಜ್ ಅವರ ಕಟುಪ್ರವಚನ ಕಾರ್ಯಕ್ರಮವನ್ನು ಜ್ಯೋತಿ ಬೆಳಗಿಸಿ ಉದ್ಘಾಟಿಸಿದರು. ದಿಗಂಬರ ಜೈನ ಸಮಾಜದ ಗಣ್ಯರು ಹಾಜರಿದ್ದರು.



ಪೂಜ್ಯ ಶ್ರೀಶ್ರೀಗಳವರ ತುಮಕೂರಿನಲ್ಲಿ ಹೆಚ್.ಎಂ.ಟಿ. ಟ್ರಾಕ್ಟರ್ ಷೋರೂಂ ಮಳಿಗೆಯನ್ನು ಉದ್ಘಾಟಿಸಿದರು. ಎಸ್.ಬಿ.ಎಂ. ಜನರಲ್ ಮ್ಯಾನೇಜರ್ (ಯೋಜನೆ ಮತ್ತು ಅಭಿವೃದ್ಧಿ) ಶ್ರೀ ಬಿ.ಎನ್. ರಾಮಯ್ಯನವರು, ಎಸ್.ಬಿ.ಎಂ. ಪ್ರಾಂತೀಯ ಅಧಿಕಾರಿ ವಿ.ಎಸ್. ಸೂರ್ಯನ್. ಬ್ಯಾಂಕಿನ ನಿರ್ದೇಶಕರಾದ ಶ್ರೀ ಕೊಪ್ಪಲ್ ನಾಗರಾಜ್ ಮುಂತಾದವರು ಹಾಜರಿದ್ದರು.



ಶ್ರೀ ಮಠದ ದೈಹಿಕ ಶಿಕ್ಷಣ ಮಹಾವಿದ್ಯಾಲಯದ ಪ್ರಥಮ ವಾರ್ಷಿಕ ಸಮಾರೋಪ ಸಮಾರಂಭವನ್ನು ಪೂಜ್ಯ ಶ್ರೀ ಸಿದ್ಧಲಿಂಗ ಸ್ವಾಮಿಗಳವರು ಉದ್ಘಾಟಿಸಿದರು. ಗುಲ್ಬರ್ಗ ವಿವಿ ಕುಲಪತಿಗಳಾದ ಶ್ರೀ ಪ್ರತಾಪ್‌ಸಿಂಗ್ ತಿವಾರಿ, ಶ್ರೀ ಮಠದ ಎ.ಓ. ಶ್ರೀ ಪಿ.ಎಸ್. ಪುಟ್ಟ ಶಂಕರಯ್ಯ, ಮುಖ್ಯ ಅತಿಥಿಗಳಾದ ಇಂಡಿಯನ್ ಎಕ್ಸ್‌ಪ್ರೆಸ್ ಪತ್ರಿಕೆಯ ವರದಿಗಾರರಾದ ಹೆಚ್.ಬಿ. ದೇವರಾಜ್, ಪ್ರಾಂಶುಪಾಲರಾದ ಡಾ|| ಎ.ಎಂ. ಮಂಜುನಾಥ್ ಮತ್ತು ಸಹ ಅಧ್ಯಾಪಕರುಗಳು ಹಾಜರಿದ್ದರು.



ಪರಮ ಪೂಜ್ಯರು ತುಮಕೂರು ನಗರದ ಒಕ್ಕಲಿಗರ ಸಂಘದ ಆವರಣದಲ್ಲಿ ನೂತನವಾಗಿ ಪ್ರಾರಂಭಿಸಿರುವ ಎನ್.ವಿ.ಜಿ. ಹೆಲ್ತ್‌ಕೇರ್ ಮತ್ತು ಫಾರ್ಮಸಿಯನ್ನು ಉದ್ಘಾಟಿಸಿದರು. ರೋಟರಿ ಅಧ್ಯಕ್ಷ ಶ್ರೀ ಎಮ್.ವಿ. ಬಸವರಾಜು, ಶ್ರೀ ಆನಂದ ಕುಮಾರ್, ಶ್ರೀ ಎಮ್.ವಿ. ವಿಠಲ್, ಶ್ರೀ ಪಿ.ಎನ್. ಶಿವರುದ್ರಯ್ಯ ಶ್ರೀ ಚೆನ್ನದೇವರು ಮತ್ತಿತರರು ಹಾಜರಿದ್ದರು.



ಪರಮ ಪೂಜ್ಯ ಶ್ರೀ ಶ್ರೀಗಳವರು ಗುಬ್ಬಿ ತಾ|| ಹೊನ್ನ ಶೆಟ್ಟಿಹಳ್ಳಿಯ ಸಮಗ್ರ ಗ್ರಾಮೀಣಾಭಿವೃದ್ಧಿಯ ರುವಾರಿಗಳಾದ ಶ್ರೀ ಹೆಚ್.ಟಿ. ಕೃಷ್ಣಪ್ಪ ಇವರು ಹಮ್ಮಿಕೊಂಡಿದ್ದ ಕಾರ್ಯಕ್ರಮವನ್ನು ಜ್ಯೋತಿ ಬೆಳಗಿಸಿ ಉದ್ಘಾಟಿಸಿದರು. ತುಮಕೂರು ರಾಮಕೃಷ್ಣಾಶ್ರಮದ ಪೂಜ್ಯ ಶ್ರೀ ವೀರೇಶಾನಂದ ಸ್ವಾಮಿಗಳವರು ಅಧ್ಯಕ್ಷತೆ ವಹಿಸಿದ್ದರು.



ಪರಮ ಪೂಜ್ಯ ಶ್ರೀ ಶ್ರೀಗಳವರು ತುಮಕೂರಿನಲ್ಲಿ ಶತಮಾನ ಕಂಡ ಶರಣೆ ಪಿ.ಸಿ. ಪಾರ್ವತಮ್ಮನವರನ್ನು ಸನ್ಮಾನಿಸಿದರು. ಅಪಾರ ಬಂಧು ಬಳಗದವರು ಹಾಜರಿದ್ದರು.

Cover printed at : Geetanjali Graphics, # 4, M.S.R. Indl. Estate, Bangalore-54. Ph : 23604087